ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ
ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಜನಾಂಗದವರ
ಸಂಸ್ಕೃತಿ ಸೋಬಾನೆಗಳ ಸಂಗ್ರಹ

# ಹಸೆ ಮಣೆ



ಸಂಗ್ರಹ ಲೇಖಕರು

**ಬೈತಡ್ಕ ಜಾನಕಿ ಬೆಳ್ಯಪ್ಪ**







ಶ್ರೀ ಶೃಂಗೇರಿ ಶಾರದಾಂಬೆ

ಕುಲದೇವರು
ಶ್ರೀ ವೆಂಕಟರಮಣ ಸ್ವಾಮಿ



ಶೃಂಗೇರಿ
ಜಗದ್ಗುರುಗಳು

ಕೊಡಗಿನಲ್ಲಿ ಗೌಡ ಜನಾಂಗದ ಮದುವೆಯ ವಧುವರರ ಉಡುಗೆ ತೊಡುಗೆ



ಅಂದು ಇಂದು

# ಹಸೆಮಣೆ

ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಜನಾಂಗದ ಭಾಷೆ, ಸಂಸ್ಕೃತಿ,
ಸಂಪ್ರದಾಯ, ಆಚಾರ- ವಿಚಾರ, ನೀತಿ - ನಿಯಮ, ಕಟ್ಟು- ಕಟ್ಟಳೆ,
ಸೋಬಾನೆ ಪದಪುಂಜಗಳ ಸರಮಾಲೆಯನ್ನು ಸಂಗ್ರಹಿಸಿ, ಕ್ರೋಢೀಕರಿಸಿ
ಪುಸ್ತಕ ರೂಪದಲ್ಲಿ ಹೊರತರಲಾಗಿದೆ.
ಜನಾಂಗದ ಭಾಷೆ ಮತ್ತು ಸಂಸ್ಕೃತಿಯನ್ನು ಉಳಿಸುವ ನಿಟ್ಟಿನಲ್ಲಿ ಯುವ ಜನಾಂಗದ
ಭವಿಷ್ಯಕೋಸ್ಕರ ಹಸೆಮಣೆ ಪುಸ್ತಕವನ್ನು ಹೊರತರಲಾಗಿದೆ.

# ಅರ್ಪಣೆ

ಸಣ್ಣ ಸಣ್ಣಾ ನಾಮ | ಸಣ್ಣಾ ನೀಲಿಯ ನಾಮ |
ಎಷ್ಟೊಂದು ನಾಮ ಹರಿನಾಮ ||
ಎಷ್ಟೊಂದು ನಾಮ ಹರಿನಾಮ ವೆಂಕಟನಾಮ |
ಹಳ್ಳದ ಸಾಲಲಿ ಹರಿಸೇವೆ || ವೆಂಕಟರಮಣ
ಶನಿವಾರದ ಶಂಖ ನುಡಿದಾವು || ವೆಂಕಟರಮಣ
ಅಣ್ಣ ಗೋಲಾಡಿ ಬರುತಾರೆ ||
ಸ್ವಾಮಿ ಶ್ರೀವೆಂಕಟರಮಣ ಸ್ವಾಮಿಯ
ಪಾದಾರವಿಂದಕೆ ನಮೋ ನಮಃ...



ಪ್ರಕಾಶಕರು

**ಕೊಡಗು ಗೌಡ ಮಹಿಳಾ ಒಕ್ಕೂಟ, ಮಡಿಕೇರಿ**

ಸಂಗ್ರಹ ಲೇಖಕರು :
ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ
21-16 ರೇಸ್‌ಕೋರ್ಸ್ ರಸ್ತೆ,
ಎಲ್.ಐ.ಸಿ. ಕಛೇರಿ ಹತ್ತಿರ, ಮಡಿಕೇರಿ -571 201, ಕೊಡಗು ಜಿಲ್ಲೆ
ಮೊ: 9008571899

ಪ್ರಥಮ ಮುದ್ರಣ : 2000 ಪ್ರತಿಗಳು : 1000
ಪ್ರಕಾಶನ : ಕೊಡಗು ಸಂಗಾತಿ,

ದ್ವಿತೀಯ ಮುದ್ರಣ : 2010 ಪ್ರತಿಗಳು : 500
ಪ್ರಕಾಶನ : ಗೌಡ ಮಹಿಳಾ ಒಕ್ಕೂಟ, ಮಡಿಕೇರಿ, ಕೊಡಗು
ಪುಟಗಳು : 123

ತೃತೀಯ ಮುದ್ರಣ : 2016 ಪ್ರತಿಗಳು : 1000
ಪ್ರಕಾಶನ : ಗೌಡ ಮಹಿಳಾ ಒಕ್ಕೂಟ, ಮಡಿಕೇರಿ, ಕೊಡಗು
ಪುಟಗಳು : 142

ನಾಲ್ಕನೇ ಮುದ್ರಣ : 2021 ಪ್ರತಿಗಳು : 500
ಪ್ರಕಾಶನ : ಗೌಡ ಮಹಿಳಾ ಒಕ್ಕೂಟ, ಮಡಿಕೇರಿ, ಕೊಡಗು
ಪುಟಗಳು : 144
ಬೆಲೆ : ರೂ. 130/-

ಲೇಖಕರ ವಿಳಾಸ :
ಬೈತಡ್ಕ ಜಾನಕಿ ಬೆಳ್ಯಪ್ಪ
ಮನೆ ನಂ. 21/16, ರೇಸ್‌ಕೋರ್ಸ್ ರಸ್ತೆ,
ಎಲ್.ಐ.ಸಿ. ಬಳಿ, ಮಡಿಕೇರಿ.
**Ph : 90085 71899**

ಮುದ್ರಕರು :
ಶ್ರೀಕೃಷ್ಣ ಕಂಪ್ಯೂಟರ್ಸ್ ಅಂಡ್ ಪ್ರಿಂಟರ್ಸ್,
ಪೂಜಾ ಆರ್ಕೇಡ್, ಜೂನಿಯರ್ ಕಾಲೇಜ್ ರಸ್ತೆ, ಮಡಿಕೇರಿ.
**Ph : : 08272- 224919, Mob : 9448135592.**



# ಶುಭ ಹಾರೈಕೆ

## ಗೌಡ ಸಮಾಜ - ಮಡಿಕೇರಿ

ಕೊಡಗು

ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಜನಾಂಗದ ಸಂಸ್ಕೃತಿಯನ್ನು ಜಾನಪದ ಸಾಹಿತ್ಯದ ಮುಖಾಂತರ 'ಹಸೆಮಣೆ' ಎಂಬ ಶಿರೋನಾಮೆಯ ಸೋಬಾನೆ ಸಂಗ್ರಹವನ್ನು ಕನ್ನಡ ಸಾಹಿತ್ಯ ರಂಗಕ್ಕೆ ಅರ್ಪಿಸಿರುವ ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪನವರ ಶ್ರಮ ಶ್ಲಾಘನೀಯ.

ಈ ಸೋಬಾನೆ ಹಾಡುಗಳ ಒಳ ಅರ್ಥ ತಿಳಿಯುವರೆ ನಮ್ಮ ಸಂಸ್ಕೃತಿ, ಸಂಪ್ರದಾಯ, ಆಚಾರ ವಿಚಾರದ ಅರಿವನ್ನು ನಮ್ಮ ಯುವ ಜನಾಂಗಕ್ಕೆ ತಿಳಿಯಪಡಿಸುತ್ತದೆ. ಜಾನಪದ ಸಾಹಿತ್ಯದಲ್ಲಿ ನಮ್ಮ ಜನಾಂಗದ ಸಂಸ್ಕೃತಿಯನ್ನು ಗುರುತಿಸುವಂತೆ ಪ್ರಾಮಾಣಿಕ ಪ್ರಯತ್ನ ಮಾಡುವ ಕರ್ತವ್ಯ ನಮ್ಮದಾಗಿದೆ. ಈ ದಿಸೆಯಲ್ಲಿ ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪನವರ ಸಂಗ್ರಹಣೆ ಬಹಳ ಉಪಯುಕ್ತ.

ಜನಾಂಗದ ಮೇಲಿನ ಮಮತೆಯಿಂದ ಮತ್ತು ನಮ್ಮ ಉತ್ತಮ ಸಂಸ್ಕೃತಿಯನ್ನು ಉಳಿಸುವ ಮತ್ತು ಬೆಳೆಸುವ ಹಾಗೂ ಕರ್ನಾಟಕದ ಜಾನಪದ, ಸಾಹಿತ್ಯ ರಂಗದಲ್ಲಿ ನಮ್ಮ ಸಂಸ್ಕೃತಿಯನ್ನು ಗುರುತಿಸುವ ಸದುದ್ದೇಶದಿಂದ ಈ ಕೃತಿಯನ್ನು ಹೊರತಂದಿರುವ ಶ್ರೀಮತಿ ಜಾನಕಿಯವರಿಗೆ ನಮ್ಮ ಸಮಾಜದ ಒಲವಿನ ಶುಭ ಹಾರೈಕೆಗಳು ಹಾಗೂ ನಮ್ಮ ಕುಲದೇವರಾದ ಶ್ರೀ ವೆಂಕಟರಮಣ ದೇವರು ಶ್ರೀಮತಿ ಜಾನಕಿಯರವನ್ನು ಆಶೀರ್ವದಿಸಲಿ ಎಂದು ನಾವು ಪ್ರಾರ್ಥಿಸುತ್ತೇವೆ.

✍ ತೋಟಂಬೈಲು ಮಾ. ನಾಣಯ್ಯ
ಅಧ್ಯಕ್ಷರು,
ಗೌಡ ಸಮಾಜ, ಮಡಿಕೇರಿ.

# ಹಾರೈಕೆ

ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ ಅವರು ತಮ್ಮ 'ಹಸೆಮಣೆ' ಪುಸ್ತಕವನ್ನು ಮರುಮುದ್ರಿಸುತ್ತಿರುವುದು ತುಂಬ ಸಂತಸದ ಸಂಗತಿ. ಶ್ರೀಮತಿ ಜಾನಕಿಯವರನ್ನು ಕಳೆದ ನಾಲ್ಕೈದು ವರ್ಷಗಳಿಂದ ನಾನು ಬಲ್ಲೆ. ಅವರದು ಕ್ರಿಯಾಶೀಲ ವ್ಯಕ್ತಿತ್ವ. ನಮ್ಮ ಬಾನುಲಿ ಕೇಂದ್ರದ ಸ್ನೇಹಕಾವೇರಿ ಅರೆಭಾಷಾ ಕಾರ್ಯಕ್ರಮಕ್ಕೆ ಅವರು ಬೆನ್ನೆಲುಬು ಇದ್ದಂತೆ. ಹಲವು ಉತ್ಸಾಹಿ ಮಹಿಳೆಯರಿಗೆ ಉತ್ತೇಜನ ಕೊಟ್ಟು ಅವರನ್ನು ಆಕಾಶವಾಣಿಗೆ ಕರೆತಂದು ಕಾರ್ಯಕ್ರಮ ನೀಡಿ ಜಾನಕಿಯವರು ಜನಾಂಗದ ಹಾಗೂ ನಮ್ಮ ಸಮಸ್ತ ಶ್ರೋತೃವೃಂದದ ಗೌರವಕ್ಕೆ ಬಾಜನರಾಗಿದ್ದಾರೆ.

ಯಾವುದೇ ಜನಾಂಗದ ಸಾಂಸ್ಕೃತಿಕ ಉತ್ಕರ್ಷೆಗೆ ಆಯಾ ಜನಾಂಗದ ಇಂಥ ಸೃಜನಶೀಲ ವ್ಯಕ್ತಿಗಳ ದೇಣಿಗೆ ಬಹಳವಿರುತ್ತದೆ. ಮದುವೆ ಸಂಪ್ರದಾಯದ ಹಾಡುಗಳನ್ನು ಈ ರೂಪದಲ್ಲಿ ಶಾಶ್ವತಗೊಳಿಸಿ ಶ್ರೀಮತಿ ಜಾನಕಿ ಬೆಳ್ಯಪ್ಪನವರು ಗೌಡ ಜನಾಂಗವು ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳುವಂತೆ ಮಾಡಿದ್ದಾರೆ. ಸೋಬಾನೆಯನ್ನು ಉಳಿಸುವುದೆಂದರೆ ಸಂಸ್ಕೃತಿಯನ್ನು ಉಳಿಸುವುದು ಎಂದೇ ಅರ್ಥ. ಈ ದೃಷ್ಟಿಯಿಂದ ಜನಾಂಗಕ್ಕೆ ಶ್ರೀಮತಿ ಜಾನಕಿ ಅವರಿಂದ ಮಹದುಪಕಾರವೇ ಆಗಿದೆ.

ಶ್ರೀಮತಿ ಜಾನಕಿ ಬೆಳ್ಯಪ್ಪನವರಿಂದ ಜನಾಂಗಕ್ಕೆ ಇನ್ನಷ್ಟು ಸೇವೆ ಲಭಿಸಲಿ. ದಣಿವು ಕಾಣದ ಅವರ ಕಾರ್ಯವೈಖರಿ ಯುವಕ ಯುವತಿಯರಿಗೆ ದಾರಿದೀವಿಗೆಯಾಗಲಿ ಎಂದು ಹಾರೈಸುವೆ.

✍ ಶ್ರೀಮತಿ ಇಂದಿರಾ ಗಜರಾಜ್

ಮಡಿಕೇರಿ — ನಿಲಯ ನಿರ್ದೇಶಕರು

24-9-2010 — ಆಕಾಶವಾಣಿ,

ಮಡಿಕೇರಿ.

# ಮುನ್ನುಡಿ

ಜಾನಪದ ಕಲೆಯನ್ನು ಆಧುನಿಕವಾಗಿ ಸಾಮಾನ್ಯ ಜನರ ಸಂಸ್ಕೃತಿ ಎಂಬುದಾಗಿ ಭಾವಿಸಿದ್ದಾರೆ. ಜನಪದ ಸಾಹಿತ್ಯವು ಒಂದು ಜನಾಂಗದ ಯಾ ಕೋಮಿನ ಸಂಸ್ಕೃತಿಯ ನಿಲುಗನ್ನಡಿ. ಅದರಂತೆ ಗೌಡರು ಅವರ ಎಲ್ಲಾ ಶುಭಕಾರ್ಯಗಳನ್ನು ಸೋಬಾನೆಯ ರೂಪದಲ್ಲಿ ಹೇಳಿ ಪ್ರದರ್ಶಿಸುತ್ತಾರೆ.

ಸಂಸ್ಕೃತಿಯು ಆ ಜನಾಂಗದ ಜನಪದ ಸಾಹಿತ್ಯದಲ್ಲಿ ಅಡಕವಾಗಿರುತ್ತದೆ. ಅದೇ ರೀತಿ ಗೌಡ ಜನಾಂಗದ ಸಂಸ್ಕೃತಿಯು ಅವರ ಸೋಬಾನೆ ಹಾಡುಗಳಿಂದ ವ್ಯಕ್ತವಾಗುತ್ತದೆ. ಗೌಡರ ಶುಭ ಕಾರ್ಯಗಳಾದ ಮಗುವಿಗೆ ಹೆಸರಿಡುವ ಹಂತದಿಂದ ಪ್ರಾರಂಭಗೊಂಡು ಮದುವೆಯ ಎಲ್ಲಾ ಕಾರ್ಯಗಳು ಕಳೆಯುವವರೆಗೂ, ಆ ಕಾರ್ಯಗಳನ್ನು ಹಾಡಿನ ರೂಪದಲ್ಲಿ ಹೇಳುತ್ತಾರೆ. ಉದಾಹರಣೆಗೆ ಮದುಮಕ್ಕಳನ್ನು ಕೂರಿಸುವ ಸ್ಥಳವು ಹೊನ್ನಿನ ಹಸೆಯಿಂದ ಕಂಗೊಳಿಸಬೇಕೆಂದು "ಆ ಬಣ್ಣಾ ಬರಿರಣ್ಣಾ, ಈ ಬಣ್ಣ ಬರಿರಣ್ಣಾ" ಎಂದು ಮುತ್ತೈದೆಯರು ಹಸೆ ಬರೆಯುವವರನ್ನು ಹಾಡಿನ ಮೂಲಕ ಕೋರುತ್ತಾರೆ. ಹಿಂದಿನ ಕಾಲದಲ್ಲಿ ಹಸೆಯನ್ನು ಋಷಿಗಳು ವಿಭೂತಿಯಿಂದ ಬರೆಯುತ್ತಿದ್ದರು. ಹೀಗೆ ಎಣ್ಣೆ ಅರಶಿಣ ಶಾಸ್ತ್ರ, ಮದುರಂಗಿ ಶಾಸ್ತ್ರ, ಗಂಡಿನ ಮುಖ ಕ್ಷೌರ ಚಂದವಾಗಿರಲು ಕ್ಷೌರಿಕನನ್ನು ಕೇಳಿಕೊಳ್ಳುತ್ತಾರೆ. ಗಂಡು ಹೆಣ್ಣಿನ ಮಂಗಳ ಸ್ನಾನ, ಗಂಗೆ ಪೂಜೆ ಆರತಿ ಧಾರೆ, ಶೃಂಗೇರಿ ಮಠಕ್ಕೆ ಹರಿಕೆ ಹಣ ಕಟ್ಟುವುದು, ಹೆಣ್ಣು ಇಳಿಸುವುದರಿಂದ ಬಾಗಿಲು ತಡೆಯುವ ತನಕ ಎಲ್ಲಾ ಹಂತಗಳಲ್ಲಿ ಹಾಡುವ ಸೋಬಾನೆ ಹಾಡುಗಳಿಂದ ಆ ಜನಾಂಗದ ಮೂಲ ಸಂಸ್ಕೃತಿಯನ್ನು ಕಂಡು ಹಿಡಿಯಬಹುದಾಗಿದೆ.

ಅಲ್ಲಲ್ಲಿ ಬರುವ ಮುಖ್ಯ ಹಾಡುಗಳಲ್ಲಿ ಹೆಣ್ಣನ್ನು ಸೀತಾದೇವಿ, ರುಕ್ಮಿಣಿ ಹಾಗೂ ಪಾರ್ವತಿಯವರಿಗೆ ಹೋಲಿಸಿದರೆ ಗಂಡನ್ನು ಶ್ರೀರಾಮ, ಕೃಷ್ಣ, ಶಿವನಿಗೆ ಹೋಲಿಸಿ ಅವರಂತೆ ಒಳ್ಳೆಯ ಗುಣವಂತರಾಗಿ ಬಾಳಲೆಂದು ಹರಸುತ್ತಾರೆ. ಹೀಗೆ ಹಿಂದಿನ ಕಾಲದಿಂದಲೂ ಸೋಬಾನೆಗಳನ್ನು ಬಾಯಿಂದ ಬಾಯಿಗೆ ಹೇಳಿ ಕಲಿಯುತ್ತಿದ್ದರು. ಒಗ್ಗಟ್ಟಿನಿಂದ ಗುಂಪುಗುಂಪಾಗಿ ಕೂಡಿ ಬೇಸಾಯದ ಕೆಲಸಗಳಲ್ಲಿ ಹಾಡುತ್ತಾ ಕಲಿಯುತ್ತಾ ಪ್ರೀತಿ ವಿಶ್ವಾಸದಿಂದಿದ್ದರು. ಭತ್ತದ ಬೇಸಾಯ ಕಾರ್ಯಪ್ರಾರಂಭವಾಗುವಲ್ಲಿಂದ ಹಿಡಿದು ಅದು ಮುಗಿಯುವ ತನಕವು ಹೆಂಗಸರು ಸುವ್ವಿ ತುಂಬಿ ಹಾಡುಗಳನ್ನು ಹಾಡುತ್ತಾ ತಮ್ಮ ದೇಹದ ಆಲಸ್ಯವನ್ನು ಹೋಗಲಾಡಿಸಿ ಮನೋರಂಜನೆಯನ್ನು ಕಂಡುಕೊಳ್ಳುತ್ತಿದ್ದರು. ಇತ್ತೀಚೆಗೆ ಇವೆಲ್ಲಾ ಮಾಯವಾಗುತ್ತಾ ಬಂದಿವೆ.

ಈ ಸಂದರ್ಭದಲ್ಲಿ ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪನವರು ಶ್ರಮವಹಿಸಿ ಪೂರ್ವ ಸಂಸ್ಕೃತಿಯ ಪ್ರಮುಖ ಹಂತಗಳಲ್ಲಿ ಬರುವ ಎಲ್ಲಾ ವಿಧದ ಸೋಬಾನೆ ಹಾಡುಗಳನ್ನು ಸಂಗ್ರಹಿಸಿ ಕ್ರೋಢೀಕರಿಸಿ ಬರೆದು ಪುಸ್ತಕ ರೂಪದಲ್ಲಿ ಗೌಡ ಜನಾಂಗಕ್ಕೆ ಬಳುವಳಿಯಾಗಿ ಕೊಟ್ಟಿದ್ದಾರೆ. ನಶಿಸಿ ಹೋಗುತ್ತಿದ್ದ ಸೋಬಾನೆಯ ಅವಶೇಷಗಳನ್ನು ಕಂಡುಹಿಡಿದು ನಮ್ಮ ಸಂಸ್ಕೃತಿಯ ಪುನರುದ್ಧಾರಕ್ಕಾಗಿ ಶ್ರಮಿಸಿದ್ದಾರೆ. ಇವರ ಶ್ರಮಕ್ಕೆ ಫಲವಾಗಿ ಜನಾಂಗದ ಎಲ್ಲಾ ಕುಟುಂಬದ ಮಹಿಳೆಯರು ಓದಿ ಕಲಿತು ಆಯಾ ಸಂದರ್ಭಗಳಲ್ಲಿ ಹಾಡಿದರೆ ಜನಪದ ರಂಗದಲ್ಲಿ ಸೋಬಾನೆ ಹಾಡುಗಳು ಉಳಿದು ನಮ್ಮ ಸಂಸ್ಕೃತಿಯನ್ನು ಬೆಳೆಸುವುದಲ್ಲದೆ ಲೇಖಕಿಯವರ ಶ್ರಮವು ಸಫಲವಾದೀತೆಂದು ಆಶಿಸುತ್ತೇನೆ.

✍ ಪ್ರೊ || ಪೂಜಾರಿ ಮೊಣ್ಣಪ್ಪ, ಬೆಂಗಳೂರು

# ಲೇಖಕಿಯ ನುಡಿ

ಸೋಬಾನೆ ಸಂಗ್ರಹಕ್ಕೆ ಮೂಲ ಕಾರಣರಾದವರು ಶ್ರೀ ಪೂಜಾರಿ ಮೊಣ್ಣಪ್ಪನವರು ಅವರು 1999ರಲ್ಲಿ ಅಂದು ನೀಡಿದ ಪ್ರೋತ್ಸಾಹವು ಒಂದು ಸಂಸ್ಕೃತಿಯ ಶಾಶ್ವತ ಉಳಿವಿಗೆ ಕಾರಣವಾಯಿತು.

ಕರ್ನಾಟಕ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡಮಿಯು ಸಂಸ್ಕೃತಿಯನ್ನು ಮೂಲೆ ಮೂಲೆಗೆ ತಲುಪಿಸುವ ನಿಟ್ಟಿನಲ್ಲಿ ಸಂಸ್ಕೃತಿ ಶಿಬಿರಗಳನ್ನು ಏರ್ಪಡಿಸುವುದರ ಮೂಲಕ ಜಾಗೃತರಾದ ಯುವ ಪೀಳಿಗೆಯ ಸೋಬಾನೆ ಹಾಡುಗಳನ್ನು ಕಲಿಯುವ ತವಕ ಮತ್ತು ಆಸಕ್ತಿಯಿಂದಾಗಿ ನಾಲ್ಕನೇ ಮುದ್ರಣದ ಅನಿವಾರ್ಯತೆ ಇದಾಗಿದ್ದು ಮುಂದಿನ ಪೀಳಿಗೆಗೆ ಅವಶ್ಯವಿರುವ ಸಂಸ್ಕೃತಿಯನ್ನು ಉಳಿಸುತ್ತಾ ಸಾಹಿತ್ಯವನ್ನು ಬೆಳೆಸುವ ಜವಾಬ್ದಾರಿ ಹೆಚ್ಚಾಗಿದೆ. ಒಂದು ಜನಾಂಗದ ಸಂಸ್ಕೃತಿಯನ್ನು ಉಳಿಸುವ ಕಾರ್ಯಕ್ರಮ ವೈಖರಿ ಮಹತ್ವಪೂರ್ಣವಾದದ್ದು.

ಹಸೆಮಣೆ ಮೂರನೆ ಮುದ್ರಣಕ್ಕೆ ಅರೆಭಾಷೆ ಅಕಾಡೆಮಿಯ ಬಿರುಸಿನ ಚಟುವಟಿಕೆಯಿಂದ ಹಸೆಮಣೆ ಸೋಬಾನೆ ಪುಸ್ತಕಕ್ಕೆ ಅಪಾರವಾದ ಬೇಡಿಕೆ ಇರುವುದನ್ನು ಕಂಡು ಆರ್ಥಿಕ ಮುಗ್ಗಟ್ಟಿನಲ್ಲು ಯುವ ಜನತೆಗೋಸ್ಕರ ಮರು ಮುದ್ರಿಸುವ ಪ್ರಯತ್ನ ಇದು. ಈ ಮುದ್ರಣದಲ್ಲಿ ಹೆಚ್ಚು ಹಾಡುಗಳನ್ನು ಸೇರಿಸಲಾಗಿದ್ದು ಬಹಳಷ್ಟು ಹಾಡುಗಳ ಸಂಗ್ರಹ ಇದರಲ್ಲಿದ್ದು ನನಗೆ ತೃಪ್ತಿ ತಂದಿದೆ.

ಪುಸ್ತಕ ಮುದ್ರಣಕ್ಕೆ ನನ್ನ ತಲೆಮುಟ್ಟಿ ಹರಸಿದವರು ನಮ್ಮ ಹಿರಿಯರು ಮತ್ತು ಪಟ್ಟೆದಾರರಾದ ಬೈತಡ್ಕ ಎ. ಅಪ್ಪಣ್ಣ ನಿವೃತ್ತ ಮುಖ್ಯೋಪಾಧ್ಯಾಯರು ಇವರ ಪ್ರೋತ್ಸಾಹವನ್ನು ನೆನೆಯುತ್ತೇನೆ.

ನನ್ನ ಮನೆಗೆ ಬಂದು ಸೋಬಾನೆ ಮತ್ತು ಸುವ್ವಿ ಹಾಡುಗಳನ್ನು ಸುಮಾರು 2 ಗಂಟೆಕಾಲ ಬಾಯಲ್ಲಿ ಹೇಳಿದಂತೆ ಬರೆಯಲು ತಿಳಿಸಿದವರು ಶ್ರೀಮತಿ ಕೋಳು ಮುಡಿಯನ ಪಾರ್ವತಿ ರಾಮಯ್ಯ ಗಾಳಿಬೀಡು ಇವರನ್ನು ಮತ್ತು ನೀರ್ಪಾಡಿ ನಾಗವೇಣಿ ಇವರನ್ನು ಮತ್ತೊಮ್ಮೆ ನೆನೆಸುತ್ತೇನೆ.

ಇದೆಲ್ಲದರ ಜೊತೆಗೆ ನನ್ನ ಪುಸ್ತಕದ ರಚನೆಗೆ ಆರ್ಥಿಕ ಭದ್ರತೆ ಒದಗಿಸಿದವರು ನನ್ನ ಪತಿ ಬೈತಡ್ಕ ಬೆಳ್ಯಪ್ಪ ನಿವೃತ್ತ ವಾಯುಪಡೆ ಇವರು. ಅದರಂತೆ ಅಂದವಾಗಿ ಕ್ರಮ ಪ್ರಕಾರ ಹೊಂದಿಸಿ ಕೃತಿ ಮುದ್ರಿಸಿದ ಶ್ರೀ ಕೃಷ್ಣ ಕಂಪ್ಯೂಟರ್ಸ್ ಮಾಲೀಕರಿಗೆ ನನ್ನ ಶುಭ ಹಾರೈಕೆಗಳು.

ನನ್ನ ತಂದೆಯವರಾದ ದಿ||ಪಟ್ಟಡ ಮುತ್ತಣ್ಣ ಅವರು 1936ರ ಹೊತ್ತಿನಲ್ಲಿ ಬರೆದ ಸಂಗ್ರಹದಿಂದ ತೆಗೆದ ಹಾಡುಗಳನ್ನು 3ನೆ ಈ ಮುದ್ರಣದಲ್ಲಿ ಸೇರಿಸಿದ್ದು

ಅವರು ಆಗ ಬರೆದ ಅಕ್ಷರ ಮತ್ತು ಅವರ ಸಹಿಯನ್ನು ಈಗಿನ ಯುವ ಜನತೆಗೆ ಪರಿಚಯಿಸಲು ಇದರಲ್ಲಿ ಅವರ ಚಿತ್ರ ಸಹಿತ ಕೊಟ್ಟಿರುತ್ತೇನೆ.

ಸೋಬಾನೆ ಹಾಡುಗಳು ಕನ್ನಡ ನಾಡಿನ ಜಾನಪದ ಸೊತ್ತು. ಸೋಬಾನೆ, ಸುವ್ವಿ, ತುಂಬಿ ಹಾಡುಗಳು ಹಾಗೂ ಜಾನಪದ ಗೀತೆಗಳು ಕನ್ನಡ ನಾಡಿನ ಸಾಹಿತ್ಯಕ್ಕೆ ರಂಗಕ್ಕೆ ಗ್ರಾಮೀಣ ಜನರ ಕೊಡುಗೆಯಾಗಿದೆ. ಭಾರತದೇಶದ ಪರಂಪರೆಯ ಎಲ್ಲಾ ವರ್ಗದ ಜನಾಂಗಕ್ಕೆ ಅವರದೇ ಆದ ಹಾಡುಹಸೆಗಳಿರುವಂತೆ ಗೌಡ ಜನಾಂಗದ ಸ್ತ್ರೀಯರು ಕೂಡಾ ತಮ್ಮ ತಲೆಮಾರಿನಿಂದ ಬಂದಂತಹ ಸೋಬಾನೆ, ಸುವ್ವಿ, ತುಂಬಿ ಮತ್ತು ಹರಿಸೇವೆ ಹಾಡಗಳನ್ನು ತಮ್ಮ ಶುಭಕಾರ್ಯಗಳಲ್ಲಿ ಹಾಗೂ ವ್ಯವಸಾಯ – ಅಗೆ ಕೀಳುವುದು, ನಾಟಿ ನೆಡುವುದು, ಕಳೆ ಕೀಳುವುದು, ಭತ್ತ ಕುಟ್ಟುವುದು, ಅಕ್ಕಿ ಬೀಸುವುದು ಹಾಗು ಒಕ್ಕಲು ಹುಲ್ಲು ಕಟ್ಟುವುದು ಇಂತಹ ಸಂದರ್ಭಗಳಲ್ಲಿ ಗುಂಪು ಗುಂಪಾಗಿ ಕೂಡಿ ಅಚ್ಚ ಕನ್ನಡದಲ್ಲಿಯೇ ಹೇಳುತ್ತಾ, ಕೇಳುತ್ತಾ, ಕಲಿಯುತ್ತಾ ಬರುತ್ತಿದ್ದರು. ಹೀಗೆ ಹಿಂದಿನ ಕಾಲದಲ್ಲಿ ಮನರಂಜನೆ ಯೊಂದಿಗೆ ಕೆಲಸವು ನಿರಾಯಾಸವಾಗಿ ಸಾಗುತ್ತಿತ್ತು. ಒಗ್ಗಟ್ಟಿನಿಂದ ಪ್ರೀತಿ ವಿಶ್ವಾಸದಿಂದ ಬಾಳುತ್ತಿದ್ದರು.

ಹಿಂದೆ ಹಳ್ಳಿಯ ಕೆಲಸ ಮಾಡುತ್ತಿದ್ದಾಗ ಹಿರಿಯರ ಬಾಯಿಂದ ಕೇಳಿದ ನೆನಪಿನೊಂದಿಗೆ, ಈಗ ಮತ್ತೆ ಹಿರಿಯರ ಬಾಯಿಂದ ಹೇಳಿಸಿಕೊಂಡು ಸಂಗ್ರಹಿಸಿ, ಇಟ್ಟಿದ್ದರೊಂದಿಗೆ ಗೌಡಸಮಾಜ, ವಿದ್ಯಾಸಂಘಗಳು ಮುದ್ರಿಸಿದ ಹಾಡುಗಳನ್ನು ಒಟ್ಟಿಗೆ ಎಲ್ಲರು ಓದಲು ಅವಕಾಶವಾಗಲೆಂದು ಬಯಸಿ, ಈ ಪುಸ್ತಕವನ್ನು ಹೊರತರಲು 2 ವರ್ಷಗಳೇ ಕಳೆದವು. ಪುಸ್ತಕ ರೂಪದಲ್ಲಿ ತರಲು ಹಲವರು ನನ್ನನ್ನು ಒತ್ತಾಯಿಸಿದರೆ, ಕೆಲವು ಟೀಕೆಗಳು ಕೂಡಾ ಬಂದವು. ಮುಖ್ಯವಾದ ಹಾಡುಗಳ ಮೂಲ ಸ್ವರೂಪವನ್ನು ಹಾಗೆಯೆ ಉಳಿಸಬೇಕು ಎಂಬುದೇ ನನ್ನ ಆಶಯವಾಗಿದೆ.

ಶ್ರೀಮಾನ್ ಪೂಜಾರಿ ಮೊಣ್ಣಪ್ಪನವರ ಮಾರ್ಗದರ್ಶನದಲ್ಲಿ ಇದನ್ನು ಜನಾಂಗದ ಮುಂದಿಡಲು ಪ್ರಯತ್ನಿಸಿದ್ದೇನೆ. ಹಾಗೂ ನನಗೆ ಧೈರ್ಯ ತುಂಬಿ ಪ್ರೋತ್ಸಾಹಿಸಿದವರು ನಮ್ಮ ಮನೆ ಶ್ರೀಮತಿ ದೇವಮ್ಮನವರು ಮತ್ತು ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಗೌರವ ಸಂಪಾದಕರೂ, 'ನನ್ನ ಕನಸಿನ ಮಡಿಕೇರಿ' ಪುಸ್ತಕದ ಲೇಖಕರು ಹಾಗೂ ನನ್ನ ಸಹೋದರ ಶ್ರೀಯುತ ಪಟ್ಟಡ ಮುತ್ತಣ್ಣ ಪ್ರಭಾಕರ, ಹಾಗೂ ಪ್ರಕಾಶನ ನುಡಿ ಬರೆದ ಸಂಪಾದಕಿ ಶ್ರೀಮತಿ ಶೀಲಾಮಣಿ ಪ್ರಭಾಕರ, ಶುಭ ಹಾರೈಕೆಯನ್ನು ನುಡಿದ ತೋಟಂಬೈಲು ನಾಣಯ್ಯನವರು, ಅಲ್ಲದೆ ಸಕಲ ರೀತಿಯಲ್ಲೂ ಸಹಕರಿಸಿರುವ ಗೌಡ ಮಹಿಳಾ ಒಕ್ಕೂಟದ ಕಾರ್ಯಕಾರಿ ಮಂಡಳಿಯವರಿಗೂ ಮತ್ತು ನನ್ನ ಪತಿ ಹಾಗೂ ಮಕ್ಕಳಿಗೂ ನಾನು ಚಿರಋಣಿ ಯಾಗಿರುತ್ತೇನೆ.

ಇತ್ತೀಚೆಗೆ ಸರಕಾರದವರು ಜಾನಪದ ಕಲೆಗೆ ಸಾಕಷ್ಟು ಪ್ರಾಮುಖ್ಯತೆ ಕೊಡುವುದನ್ನು ಕಂಡ ನಾನು ಮುಂದಿನ ಪೀಳಿಗೆಗೆ ಇದರ ಅವಶ್ಯಕತೆ ಎಂದಾದರೊಂದು ದಿನ ಇರಬಹುದೆಂದು ನಂಬಿದ್ದೇನೆ. ಜನಾಂಗದ ಪ್ರತಿ ಮಹಿಳೆಯರು ಹಾಡುಗಳನ್ನು ಕಲಿತು ಗುಂಪಾಗಿ ಹಾಡಿದರೆ ಸ್ವಾರಸ್ಯ ಹೆಚ್ಚುತ್ತದೆ. ಹಾಗೂ ತಮ್ಮ ಮಕ್ಕಳಿಗೆ ಮೊಮ್ಮಕ್ಕಳಿಗೆ ಸಾಹಿತ್ಯ ರಂಗದಲ್ಲಿ ಸೋಬಾನೆ ಹಾಡುಗಳು ಚಿರವಾಗಿ ಉಳಿಯಲು ನಾವೆಲ್ಲರೂ ಪ್ರಯತ್ನಿಸಿ ಕುಲದೈವ ಶ್ರೀ ವೆಂಕಟರಮಣ ಸ್ವಾಮಿಯ ಕೃಪೆಗೆ ಪಾತ್ರರಾಗೋಣವೆ?

ಹಸೆಮಣೆ ಚಿತ್ರವು ಸುಮಾರು ಮುನ್ನೂರು ವರ್ಷಗಳಿಗಿಂತಲೂ ಹಳೆಯದಾಗಿದ್ದು ಇದರ ಕುಸುರಿ ಕೆಲಸವನ್ನು ಶಿಲ್ಪಿಯು ತನ್ನ ಜೀವನ ಸಂಗಾತಿಯಾದ ಪುಟ್ಟ ಉಳಿಬಾಜು ಗಳಿಂದ ಕೆತ್ತಿ, ತನ್ನ ಕೈ ಕೆಲಸದ ನಿಪುಣತೆಯನ್ನು ತೋರಿಸಿದ್ದಾನೆ. ಕೆಲಸ ಅತ್ಯಂತ ಸೂಕ್ಷ್ಮವಾಗಿದ್ದು, ನೋಡಲು ಪೂಜಾಭಾವನೆವುಕ್ಕುತ್ತದೆ. ಮಣೆಯ ಮೇಲಿನ ಚಿತ್ರವು ಸೂರ್ಯ, ಚಂದ್ರ, ಓಲೆ, ಮೂಗುತಿ, ಗಿಳಿ, ಹೂಬಳ್ಳಿಗಳಿಂದ ಅಲಂಕೃತಗೊಂಡಿದೆ. ಮಣೆ ಒಡೆಯದಿರಲೆಂದು ಕೇವಲ ಗಂಧ ಆಲ, ಹಲಸು, ಮರಗಳನ್ನು ಮಾತ್ರ ಉಪಯೋಗಿಸುತ್ತಿದ್ದರೆಂಬುವುದು ಸೋಬಾನೆ ಪದಗಳ ಮೂಲಕ ವ್ಯಕ್ತವಾಗುತ್ತದೆ. ಗಂಧದಂತೆ ಸುವಾಸನೆ, ಆಲದ ಮರದಂತೆ ವಿಶಾಲವಾಗಿ, ಹಲಸಿನ ಮರದಂತೆ ಫಲಭರಿತ ವಾಗಿರಲೆಂದೇ ಈ ಮಣೆಯ ಮೇಲೆ ಕೂರುವ ಮದುಮಕ್ಕಳನ್ನು ಹರಸಿರುವುದು ಮುನಿಗಳ ಕೃಪೆ ಇದಕ್ಕೆ ಅರ್ಥಪೂರ್ಣವಾಗಿದೆ.

ಕೆಲವು ಕಡೆ ಮಣೆಯ ಮೇಲೆ ನಿಂತು ಧಾರಾ ಕಾರ್ಯವನ್ನು ಪೂರೈಸಿದರೆ ಗೋಡೆಯಲ್ಲಿ ಹಸೆ ಬರೆಯಲು ಕೂರುವ ಮುನಿಗಳಿಗೆಂದೇ ಮಣೆಯು ಕೆತ್ತಲ್ಪಟ್ಟಿದೆ. ಸಾಂಪ್ರದಾಯಕವಾಗಿ ಮದುಮಕ್ಕಳು ಎಣ್ಣೆ ಅರಶಿನ ಶಾಸ್ತ್ರಕ್ಕೆ ಕೂರುವ ಮಣೆ ಇದಾಗಿದ್ದು, ಉಳಿದಂತೆ ದೇವರ ಕೋಣೆಯಲ್ಲಿರುವ ಅಪೂರ್ವ ಮಹತ್ವವನ್ನು ಹೊಂದಿರುವ ಈ ಮರದ ಮಣೆಯು ಹಸೆಮಣೆ ಎಂದು ಪ್ರಖ್ಯಾತಿಯಾಗಿದೆ. ಹಿಂದಿನ ಕಾಲದಲ್ಲಿ ಋಷಿಗಳು ನಂತರ ಬ್ರಾಹ್ಮಣರು ಈಗ ಸೋದರ ಭಾವಂದಿರು ಹಸೆ ಬರೆಯುವ ಕ್ರಮ ರೂಢಿಯಲ್ಲಿದೆ.

ಇದರಲ್ಲಿ ಕುಳಿತ ಮದು ಮಕ್ಕಳನ್ನು ದೇವರಿಗೆ ಹೋಲಿಸಿ, ಪ್ರತೀ ಶಾಸ್ತ್ರದಲ್ಲು ದೇವರ ಹೆಸರು ಅಂದರೆ ಶಿವ ಪಾರ್ವತಿ, ಕೃಷ್ಣ ರುಕ್ಮಿಣಿ, ರಾಮಸೀತೆ, ವೆಂಕಟರಮಣ ಪದ್ಮಾವತಿ ಹೀಗೆ ಅವರ ಗುಣಗಾನ ಮಾಡುವ ಸೋಬಾನೆ ಪದಗಳನ್ನು ಹಾಡುವುದರ ಮೂಲಕ ಅವರಂತೆ ದೀರ್ಘಾಯುಷಿಗಳಾಗಿ, ಗುಣವಂತರಾಗಿ ಬಾಳಲು ಹಾರೈಸುವ ದಾಂಪತ್ಯ ಜೀವನದ ಸೋಬಾನೆ ಪದಗಳ ಪುಂಜವೇ ಸೋಬಾನೆ ಹಾಡುಗಳಾಗಿವೆ.

ಸೋಬಾನೆ ಪದಗಳನ್ನು ಹೆಚ್ಚಾಗಿ ಹೆಂಗಸರೇ ಹಾಡುವುದರಿಂದ ಅವು ಹೆಂಗಸರ ಹಾಡುಗಳೆಂದು ಪ್ರಸಿದ್ಧವಾಗಿವೆ. ಶುಭವೆನ್ನಿ ಎನ್ನುವ ಪದವು ಸೋಬಾನೆಯಾಗಿದ್ದು, ಪುರೋಹಿತರಿಲ್ಲದ ಮದುವೆಗಳಲ್ಲಿ ಶಾಸ್ತ್ರಗಳನ್ನು ಪರಿಚಯಿಸುವ ಹಾಡು ಮಂತ್ರದಷ್ಟೇ ಪವಿತ್ರ ಎಂದು ನಂಬಲಾಗಿದೆ. ಸೋಬಾನೆ ಮದುವೆಗೆ ಸಂಬಂಧಿಸಿದ ಪದಗಳೇ ಆಗಿವೆ.

ಹಸೆಮಣೆ ಕೃತಿಯು ಎರಡನೆ ಆವೃತ್ತಿಗೆ ಕಾಲಿಡುತ್ತಿರುವುದು ಜನರಲ್ಲಿ ಸೋಬಾನೆ ಬಗ್ಗೆ ಅಭಿಮಾನಮೂಡುತ್ತಿದೆ ಎಂದೇ ಹೇಳಬೇಕು. ಸೋಬಾನೆ ಪದಗಳನ್ನು ಹಾಡುತ್ತಾ ಮದುವೆ ಮನೆಗೆ ಕಳೆ ತುಂಬಿ ಉಳಿಸಿಕೊಂಡು ಬಂದಂತಹ ನಮ್ಮ ಹಿರಿಯ ತಾಯಂದಿರಿಗೆ ಈ ಕೃತಿಯ ಮೂಲಕ ಗೌರವ ಅರ್ಪಣೆ ಮಾಡುತ್ತಿದ್ದೇನೆ.

ನಮ್ಮ ಯುವ ಜನತೆ ಹಿಂದಿನ ಜಾನಪದ ಕಲೆ, ಸಾಹಿತ್ಯ, ಸಂಪ್ರದಾಯ ಸೋಬಾನೆಗಳನ್ನು ಅವರ ಶಿಕ್ಷಣದ ಜೊತೆಯಲ್ಲಿ ತಿಳಿದುಕೊಳ್ಳುವಂತಾಗಲು ಅವರ ಹಿರಿಯರ ಸಹಕಾರ ಅಗತ್ಯ. ಹಸೆಮಣೆ ಕೃತಿಯ ಮೂಲಕ ಇತ್ತೀಚಿನ ದಿನಗಳಲ್ಲಿ ನಶಿಸುತ್ತಿದ್ದ ಗೌಡ ಸಂಸ್ಕೃತಿ ಪರಿಚಯದ ಸೋಬಾನೆ ಹಾಡುಗಳಿಗೆ ಜೀವತುಂಬಿ ಅನೇಕ ಮಹಿಳೆಯರು ಯುವತಿಯರು ತಿಳಿದು ಕಲಿತು ಹಾಡುವ ಪ್ರಯತ್ನಪಡುತ್ತಿದ್ದು, ಅವರೆಲ್ಲರಿಗೂ ನಾನು ಮನದುಂಬಿ ಹಾರೈಸುತ್ತೇನೆ.

ಸೋಬಾನೆ ಹಾಡುಗಳ "ಹಸೆಮಣೆ ಕೃತಿಗೆ ಬೇಡಿಕೆ ಹೆಚ್ಚಿದ್ದುದರಿಂದ ಇನ್ನು ಕೆಲವು ಹಾಡುಗಳನ್ನು ಸೇರಿಸುವುದರೊಂದಿಗೆ ಜಾನಪದ ಸೋಬಾನೆ ಸಂಸ್ಕೃತಿಯನ್ನು ಶಾಶ್ವತವಾಗಿ ಉಳಿಸುವ ಪ್ರಯತ್ನದ ಫಲವಾಗಿ ಎರಡನೆಯ ಮುದ್ರಣವು ಅನಿವಾರ್ಯವಾಯಿತು. ಈ ಕೃತಿಗೆ ಹಾರೈಕೆ ನುಡಿಯನ್ನು ಬರೆಯಲು ಮಹಿಳೆಯರ ಬಗ್ಗೆ ಅಪಾರವಾದ ಕಾಳಜಿ ಹೊಂದಿರುವ ಶ್ರೀಮತಿ ಇಂದಿರಾ ಗಜರಾಜ್, ನಿಲಯ ನಿರ್ದೇಶಕರು, ಆಕಾಶವಾಣಿ, ಮಡಿಕೇರಿ ಇವರು ಪ್ರೀತಿಯಿಂದ ಒಪ್ಪಿ, ತಮ್ಮ ಹಾರೈಕೆ ನುಡಿಯನ್ನು ಬರೆದು ಕೃತಿಯ ಮೆರುಗನ್ನು ಹೆಚ್ಚಿಸಿದ್ದಾರೆ.

ಗೌಡ ಸಂಸ್ಕೃತಿಯ ಬಗ್ಗೆ ಸಂಶೋಧನೆ ನಡೆಸಿದ ಡಾ॥ ಕೋರನ ಸರಸ್ವತಿ ಪ್ರಕಾಶ್ ಇವರು ಹಿನ್ನುಡಿ ಬರೆದು ಕೃತಿಯ ಘನತೆಯನ್ನು ಏರಿಸಿದ್ದಾರೆ. ನನಗೆ ಅಭಿಮಾನದಿಂದ ಸೋಬಾನೆ ಹಾಡುಗಳನ್ನು ಒದಗಿಸಿಕೊಟ್ಟು, ಕೃತಿಯು ಅರ್ಥಪೂರ್ಣವಾಗಲು ಕಾರಣರಾದ ಕೋಳುಮುಡಿಯನ ಪಾರ್ವತಿ, ಬೆಳ್ಯನ ರುಕ್ಮಿಣಿ, ಬೊಬ್ಬುರಿ ರಮಣಿ, ಕೋಡಿ ಜಯಲಕ್ಷ್ಮಿ, ಪೂವಮ್ಮ ಕೂಡಕಂಡಿ, ಕಡ್ಲೆರ ಯಶೋಧ, ಇವರುಗಳನ್ನು ನೆನೆಯುತ್ತೇನೆ.

ಈ ಕೃತಿಯ ಎರಡನೆ ಮುದ್ರಣಕ್ಕೆ ನನಗೆ ಹಾರೈಸಿ ಹಿತೈಷಿಗಳಾಗಿ ಆತ್ಮೀಯರಾಗಿ ನೆರವಾದವರು ನೀರ್ಪಾಡಿ ನಾಗವೇಣಿ, ನಿವೃತ್ತ ಕೃಷಿ ಸಹಾಯಾಧಿಕಾರಿ ಹಾಗೂ

*ನಮ್ಮ ಕುಟುಂಬದ ಆತ್ಮೀಯ ಮಿತ್ರರಾದ ಶ್ರೀ ಪಸನ್ನ ಕುಮಾರ್, ಶ್ರೀಮತಿ ಚಂದ್ರಕಲಾ ಸೋಮನಹಳ್ಳಿ, ಮದ್ದೂರು ತಾಲೂಕು, ಮಂಡ್ಯ (ಅಡಿಗಾರ್ ಹೋಟೇಲ್ ಮೈಸೂರು ಬೆಂಗಳೂರು ಹೆದ್ದಾರಿ) ಇವರುಗಳಿಗೆ ನನ್ನ ಅಂತರಾಳದ ನಮನಗಳನ್ನು ಗೌರವದಿಂದ ಸಲ್ಲಿಸುತ್ತಿದ್ದೇನೆ.*

*ಎರಡನೆಯ ಮುದ್ರಣವು ಹೊರಬೀಳುವ ಮುನ್ನ ಮುನ್ನುಡಿ ಬರೆದು ಆಶೀರ್ವದಿಸಿದ ಶ್ರೀಮಾನ್ ಪೂಜಾರಿ ಮೊಣ್ಣಪ್ಪನವರು ಅಸ್ತಮಿಸಿದ್ದು ವಿಷಾದನೀಯ.*

*ನಾನು ಲೇಖಕಿ ಅಲ್ಲದಿದ್ದರೂ, ಸೋಬಾನೆ ಸಂಗ್ರಹ ಹಸೆಮಣೆ ಕೃತಿಯೊಂದಿಗೆ (2000ಇಸವಿ) ಕನ್ನಡ ಸಾಹಿತ್ಯ ರಂಗಕ್ಕೆ ಪ್ರವೇಶಿಸಿ ಅಕ್ಷಯ ಕೃತಿ ಹಾಗೂ ಈ ಎರಡನೆಯ ಮುದ್ರಣ ತಲುಪುವಷ್ಟರಲ್ಲಿ ಗೌಡ ಜನಾಂಗದ ಸಂಸ್ಕೃತಿಯ ಆಳವಾದ ಪರಿಚಯದೊಂದಿಗೆ ಲೇಖಕಿಯಾಗಿ, ಕೃತಿಗಾರ್ತಿಯಾಗಿ ಕೊಡಗಿನ ಗೌರಮ್ಮ ದತ್ತಿ ಪ್ರಶಸ್ತಿ ಹಾಗೂ ಜಾನಪದ ಕಲಾವಿದೆ ಎಂದು ಗುರುತಿಸಿಕೊಂಡು ಮುನ್ನಡೆಯಲು ಸಹೃದಯಿಗಳ, ಗುರುಹಿರಿಯರ ಕೃಪೆ ಹಾಗೂ ಶೃಂಗೇರಿ ಶಾರದಾಂಬೆ, ಕುಲದೇವರು ಶ್ರೀ ವೆಂಕಟರಮಣ ಸ್ವಾಮಿಯ ದಯೆ ಇದೆಯೆಂದು ನಂಬಿದ್ದೇನೆ.*

*✍ ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ.*

## ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಗೌಡ ಜನಾಂಗದವರ ಸಂಸ್ಕೃತಿ ಪರಿಚಯದ ಸೋಬಾನೆ ಹಾಡುಗಳ ವಿವರ

# ಮಂಗಳವಾಗಲಿ

*ಮಂಗಳವಾಗಲಿ ಈ ಶುಭ ಕಾರ್ಯಕೆ॥*
*ಮಂಗಳವಾಗಲಿ ಮಂಗಳ ಕಾರ್ಯಕೆ*

*ಕಂಬಗಳ ತರಲೆಂದು ಅಡವಿಗೆ ಪೋದ*
*ಋಷಿ ಮುನಿವರ್ಯರಿಗೆ ಮಂಗಳವಾಗಲಿ॥*

*ಹನ್ನೆರಡು ಕಂಬಗಳ ನೀಡಿದ ಭೂಮಾತೆಗೆ*
*ಮಂಗಳ ವಾದ್ಯವ ನುಡಿಸುವ ದನಿಗೆ॥ ಮಂಗಳ॥*

*ಮಂಗಳವಾಗಲಿ ಹಸೆಮಣೆ ಕೆತ್ತಿದ ಶಿಲ್ಪಿಗೆ*
*ಮಣೆಯಲಿ ಕೈ ಹಿಡಿದು ಕೂಡಿಸಿದವರಿಗೆ॥*

*ಮಂಗಳವಾಗಲಿ ಮಂಗಳ ಕಾರ್ಯಕ್ಕೆ*
*ಶುಭವಾಗಲಿ ವಧುವರರ ಜೀವನ ಸೂತ್ರಕೆ॥*

*ಮಂಗಳವಾಗಲಿ ಶುಭ ಲಗ್ನ ಕಾರ್ಯಕೆ*
*ಜಯ ಮಂಗಳವಾಗಲಿ ಮಂಗಳ ಕಾರ್ಯಕೆ..........॥*

****



# ಚಪ್ಪರ ಕಂಬದ ಸೋಬಾನೆ

ಮೂಡಂದ ಬಂದಾವು ಮುತ್ತಿನ ಹಸೆಕಂಬಾ
ಯಾವ ಮೂಲೆಲಿ ನಿಲಬೇಕು || ಈ ಕಂಬಾ
ಈಶಾನ್ಯದ ಮೂಲೆಲಿ ನಿಲಬೇಕು ||

ಪಡುವಂದ ಬಂದಾವು ನೀಲದ ಹಸೆ ಕಂಬಾ
ಯಾವ ಮೂಲೆಲಿ ನಿಲಬೇಕು || ಈ ಕಂಬಾ
ಆಗ್ನೇಯದ ಮೂಲೆಲಿ ನಿಲಬೇಕು ||

ಬಡಗಂದ ಬಂದಾವು ಬೆಡಗಿನ ಹಸೆಕಂಬ
ಯಾವ ಮೂಲೆಲಿ ನಿಲಬೇಕು || ಈ ಕಂಬಾ
ನೈಋತ್ಯದ ಮೂಲೆಲಿ ನಿಲಬೇಕು ||

ತೆಂಕಂದ ಬಂದಾವು ಅಪರಂಜಿ ಹಸೆಕಂಬ
ಎತ್ತಿದರೆ ಮುತ್ತು ಗಿಲಿರೆಂಬ || ಈ ಕಂಬಾ
ವಾಯವ್ಯದ ಮೂಲೆಲಿ ನಿಲಬೇಕು||

ಮೂಡಲಿಂದಾ ಬಂದಾ ಮುತ್ತಿನ ಹಸೆಕಂಬ
ಎತ್ತಿದರೆ ಮುತ್ತು ಗಿಲಿರೆಂಬ || ಈ ಕಂಬಾ
ಈಶಾನ್ಯದ ಮೂಲೆಲಿ ನಿಲಬೇಕು ||

ಒಂದು ಕಂಬಕೆ ಚಿನ್ನ ಒಂದು ಕಂಬಕೆ ರನ್ನ
ಮುಂದಿನ ಕಂಬಕೆ ಮುಡುವಾಳ || ಪಚ್ಚೆತೆನೆ
ಈಶಾನ್ಯದ ಮೂಲೆಲಿ ನಿಲಬೇಕು ||

ಆ ಮೂಲೆ ಈ ಮೂಲೆ ನಾವೇನು ಬಲ್ಲೆವು
ನಾಲ್ಕು ರಾಜ್ಯಕ್ಕೆ ಹೆಸರಾದ || ಈ ಕಂಬಾ......
ದೇವರ ಮೂಲೆಲಿ ನಿಲಬೇಕು ||



# ಸೋಬಾನೆ ಲಕ್ಷ್ಮಿಗೆ

ಸೋಬಾನೆ ಸುಗುಣೆ ಶ್ರೀಲಕ್ಷ್ಮಿಗೆ
ಸೋಬಾನೆ ಸುಮಂಗಲೆ ಇಂದಿರೆಗೆ॥

ಶರಣೆಂಬೆ ಶ್ರೀ ಹರಿಯ ಚರಣಕ್ಕೆ
ಶ್ರೀ ಮನ್ನಾರಾಯಣನ ಸಿರಿಪಾದಕೆ ॥ಸೋಬಾನೆ॥

ಸದಾಕಾಲ ರಕ್ಷಿಸು ವಧುವರರ ಎಂದು
ಗರುಡ ವಾಹನಗೆ ನಮಿಸುವೆ ॥ಸೋಬಾನೆ॥

ಕ್ಷೀರ ಸಾಗರ ಕಡೆಯಲು ಉದಿಸಿದ ಶ್ರೀಲಕ್ಷ್ಮೀ
ಮಾಲಕ್ಷ್ಮೀ ರಕ್ಷಿಸಲಿ ವಧುವರರ ಸೋಬಾನೆ॥

ಮುತ್ತಿನ ಮೂಗುತಿ ಓಲೆಯ ಮಾಲಕ್ಷ್ಮೀ
ದಿವ್ಯಹಾರಗಳನ್ನು ಧರಿಸಿದ ತಾಯಿ॥

ಕಸ್ತೂರಿ ತಿಲಕ ಧರಿಸಿದ ದೇವಿಯೆ
ಸದಾಕಾಲ ರಕ್ಷಿಸು ವಧುವರರ ತಾಯೆ॥

ತಾವರೆ ಪೀಠದ ಶ್ರೀಲಕ್ಷ್ಮೀ ದೇವಿ।
ದಾರಿದ್ರ ಬರದಂತೆ ಕಾಪಾಡು ವಧುವರರಾ ತಾಯೆ॥

ಮಲ್ಲಿಗೆ ಸಂಪಿಗೆ ಸೇವಂತಿಗೆ ಹೂಗಳನು
ಮುಡಿದ ಮಾಲಕ್ಷ್ಮೀ ರಕ್ಷಿಸು॥ ಸೋಬಾನೆ॥

ನಿನ್ನ ಕೊರಳಿನ ತಾವರೆಯಂತೆ
ತಾಯಿ ಲಕ್ಷ್ಮೀದೇವಿ ರಕ್ಷಿಸೋ ರಕ್ಷಿಸಲಿ॥ ಸೋಬಾನೆ॥

****

# ಮದುವೆ ತಯಾರಿ

ಅರಮನೆ ಮುಂಭಾಗ ಪಚ್ಚೆ ಕಂಬಳಿಹಾಸಿ
ಬರುವವರ ಸ್ವಾಗತಕೆ ಅನುಮಾಡಿ॥
ಆಕಾಶದ ಚಪ್ಪರದಡಿಯಲ್ಲಿ
ಮದುವೆಯು ಭೂಮಂಡಲದಲ್ಲಿ ಸೋಬಾನವೊ॥
ಸಕಲ ಸಿದ್ಧತೆ ಅರಮನೆಯಲ್ಲಿಂದು
ಮದುವೆಯು ಮಗನಿಗೆ ಒದಗಿತೆಂದು
ಹಾಲೇರಿ ಸೀಮೆಯಿಂದ ಹಣ್ಣಡಿಕೆ ತಂದು
ಸುಳ್ಯದ ಸೀಮೆಯಿಂದ ವೀಳ್ಯದೆಲೆ ಎಳೆಹಸುರು ಸೋಬಾನವೋ।
ಕಾಸ್ತಾಳಿಗೆ ಹೇಳಿ ತಿಂಗಳಾದೊಯೆಂದು
ಮೂಡಂದ ತರುಸ್ಯಾರು ಸೇರು ಅರಶಿಣವಾ॥
ಮುತ್ತೈದೆರು ಹೋಗಿ ಬೆಲೆಮಾಡಿ ತಂದು
ಮಣ್ಣಿನ ಕಳಸಿಗೆಯಲ್ಲಿ ಸೆಕೆ ಬರುಸಿದರು॥ ಸೋಬಾನವೋ॥
ಪಡುವಣ ಕಮ್ಮಾರನ ಮೆಟ್ಟುಕತ್ತಿ ತಂದು
ಸೀಳಿ ಭಾಗವ ಮಾಡಿ ಮುತ್ತೈದೆರು॥
ಮೂಡಣ ಬಿಸುಲಿಗೆ ಒಣಹಾಕಿ ಹರವಿ
ಪಡುವಣ ಬಿಸುಲಿಗೆ ಎತ್ತಿತಂದು॥ ಸೋಬಾನವೋ॥
ಊರು ಮೇದನು ತಂದ ಬೆತ್ತದ ಮೊರದಲ್ಲಿ
ಒಣಗಿದ ಅರಶಿಣವ ಎತ್ತಿತಂದು॥
ಬಡಗದ ಬಡಗಿಯು ಕೆತ್ತಿ ತಂದ ವನಕೆಗೆ
ಗಂಧ ಧೂಪ ಹಾಕಿ ಸಿಂಗರಿಸಿದಂತೆ॥ ಸೋಬಾನವೋ॥
ಕಲ್ಲ ಒರಳಲ್ಲಿ ಕುಟ್ಟಿ ಹುಡಿ ಮಾಡಿ ಅರಶಿಣವ
ಚಿನ್ನದ ಹರಿವಾಣದಲ್ಲಿ ಅರಶಿಣ ಹುಡಿಹಾಕಿ
ಎಣ್ಣೆಗು ಅರಶಿಣಕು ಕೂಡಿ ಕಲಸಿ ತೀಡಿದರು
ಮದುಮಕ್ಕಳ ಮೈನೋಯದಂತೆ॥ ಸೋಬಾನವೋ॥
ಎಣ್ಣೆ ಅರಶಿನ ಕಲಸಿ ರಜ ಒತ್ತಲು
ಬಣ್ಣ ಬರಲಿಲ್ಲವೆಂದು ಮುತ್ತೈದೆರು
ಹಿತ್ತಲಲ್ಲಿ ಬೆಳೆದ ಅರಶಿಣವ ಕೂಡಿ
ಮದುಮಕ್ಕಳಿಗೆ ಎಣ್ಣೆ ಅರಶಿಣವ ತೀಡಿದರು ಸೋಬಾನವೋ॥

# ವಧುವರರಿಗೆ ಎಣ್ಣೆ ಶಾಸ್ತ್ರ ಮಾಡುವಾಗ ಹೇಳುವ ಸೋಬಾನೆ ಹಾಡುಗಳು

ಶಿವ-ಶಿವಾ-ಜಯ-ಜಯಾ -| ಶ್ರೀ ಗೌರೀ... ಮನೋಹರಾ.. |
ಕಾರುಣ್ಯ... ಸಾಗರ| ಕರುಣವರ ಪತಿಯೇ... ||
ಮದುವೆಯಾ -ಮಂಟಪಕೆ| ಕದಳಿಯ-ಕಂಬಗಳಾ ರಕ್ಷಿಸಿ |
ಪದ್ಮದ-ಪಟ್ಟಿಗಳ ಬಿಗಿದಿರಿಸಿ| ಅಲಂಕರಿಸಿದರು
ಮನೋಹರಾ... ಶಂಕರನಾ... ಶಿವ...ಶಿವಾ... ಜಯ ಜಯಾ-||
ಮುತ್ತಿನಾ ... ಚಪ್ಪರದಾ... ಮಧ್ಯದಲಿ ಮುತ್ತಿನಾ ಹಸೆ ಬರೆದು |
ಮುತ್ತಿಟ್ಟು ಕುಳ್ಳಿರಲು | ಕರುಪುರದ ವೀಳ್ಯಗಳಾ-ಕೊಟ್ಟು|
ಅಲಂಕರಿಸಿದರು ಶಂಕರನಾ | ಶಿವ... ಶಿವಾ...ಜಯ...ಜಯಾ... ||
ಭೇರಿ ಕಹಳೆಗಳಿಂದ | ಭೋರಿಡುವ ವಾದ್ಯಗಳಿಂದ | ನಾರಿಯರ
ಸೋಬಾನೆಗಳಿಂದ| ಅಲಂಕರಿಸಿದರು ಶಂಕರನಾ| ಶಿವ.. ಶಿವಾ.. ಜಯ...ಜಯಾ...||
ಮುತ್ತಿನ ಮಂಟಪದಲಿ | ಬೆಳ್ಳಿಯಾ ಮುಕ್ಕಾಲು ಮಡಗಿರಿಸಿ |
ಚಿನ್ನದ ತಟ್ಟೇಲಿ ಅರಶಿಣ ಎಣ್ಣೆಯಾ ಕಲಸಿಟ್ಟು || ಶಿವ...ಶಿವಾ.. ಜಯ...||
ಹಸ್ತಿ-ನಿ-ಪದ್ಮಿ ನಿ-ಶಂಕಿಣಿ ಯರೆಲ್ಲರು ಕೂಡಿ | ಅರಶಿಣಾ
ಎಣ್ಣೆ ಶಾಸ್ತ್ರ ಮಾಡಾ..ಬನ್ನಿರಿ || ಶಿವ...ಶಿವಾ...ಜಯ....ಜಯಾ....||
ಆಯುಳ್ಳ ಅರಶಿಣ ಛಾಯೆವುಳ್ಳ ಎಣ್ಣೆಯಾ|
ಎಣ್ಣೆಗೂ ಅರಶಿಣಕ್ಕೂ | ರಜಬತ್ತಿ ರಜಮುಖಿಕೆ|
ತೀಡಿದರು ನಾರಿಯರು | ಶಂಕರನಾ... ಶಿವ... ಶಿವಾ|
ಜಯ..ಜಯಾ....ಶ್ರೀ ಗೌರಿ... ಮನೋಹರಾ-ಕಾರುಣ್ಯ
ಸಾಗರಾ... ಕರುಣವರ ಪತಿಯೇ.... |

****

ಎಣ್ಣೆ ಯನೊತ್ತಿದರು-ಮೀನಾಕ್ಷಿಗೆ| ಎಣ್ಣೆ ಯ ನೊತ್ತಿದರು |
ಸುಗುಣ ಸಂಪೂರ್ಣೆಗೆ ನಿಗಮ ವಿನೂತೆಗೆ| ಜಾಜಿಯ
ಹೂವಿನೆಣ್ಣೆ ಅರಶಿಣ ಒತ್ತಿದರೂ...||
ಸುರವರನ ಬಾಲೆಗೆ | ಗಿರಿರಾಜ ಬಾಲೆಗೆ| ತಿರುವಂತಿನ
ಹೂವಿನೆಣ್ಣೆ ಅರಶಿಣ... ಒತ್ತಿದರೂ....||
ಕರುಪುರ ಲೋಲನ| ಶಂಕರನ ಪತ್ನಿಗೆ| ಸೇವಂತಿಗೆ
ಹೂವಿನೆಣ್ಣೆ ಅರಶಿಣ ಒತ್ತಿದರೂ...||
ಎಣ್ಣೆಯ ನೊತ್ತಿದರು | ಮೀನಾಕ್ಷಿಗೆ ಎಣ್ಣೆ ಯನೊತ್ತಿದರೂ...||

ರಾಮಚಂದಿರನ ನಾರೀ ಸೀತಾರತ್ನ | ಅರಶಿಣ ಹಚ್ಚುವಳೂ..|
ವೇದವ ನೊಯ್ದ ವನಾ ಕೊಂದಾ | ಭೂದರ ವೆತ್ತಿದ ಚೆಂದಾ |
ಆದಿವರಹ ಮುಕುಂದನಾ ಪಾದಕೆರೆಗಿದಳೂ...||
ನರಹರಿ ರೂಪದಿ ಮೆರೆದಾ | ಧರಣೆಯ ದಾನವ ಪಿಡಿದಾ |
ಸರಸಿಜ ಹಾಸಕೆ ಸುಖದ ಅರಶಿಣ ಹಚ್ಚುವಳೂ...||
ಧರಣಿ ಪರಶಿವರಿಂದಾ | ದುರಳ ಸುಬಾವವತರದಿ |
ಕರಯುಗಳಿಗೆ ಪರಿಮಳದಾ-ಅರಶಿಣ-ಹಚ್ಚುವಳೂ ||
ಪಾತಕಿ ಪೂತನಿಯಸುವ | ಪಾತಿವೃತ್ಯದ ಸ್ತ್ರೀಯರಾ |
ವೃತವ ಕಾತುರದಿಂದ ಕೆಡಿಸಿದಾ ಪಾದಕೆ ಅರಶಿಣ ಹಚ್ಚುವಳೂ ||
ತಪಸಿ ಕುಲಾಂಬುದಿ ಚಂದ್ರ | ಸುಪವಿತ್ರ ವಪ್ಪನಿಗೆ ಗಂಧ
ವಿಪುಲ ಶುಭಾನಂದ | ಮುದದಿ ಜಾನಕಿಯ ತೊಡೆಯೊಳಗೇರಿಸಿ ||
ಪತಿಯ ಬೆದಗಿ ನೋಳೆಯುತಾ | ಪಿತ ನುಡಿದರು ಪೂಸೆನುತಾ ||
ಭೂತಳ ಜಾತೆಯ ಮೊಗಕೆ | ನೂತನ ಕಾಂತಿಯ ಕರಕೆ
ಪ್ರೀತಿಯೊಳಾ ಶ್ರೀರಾಮ | ತಿಮರಿದ ಸುಪ್ರೇಮ ಕ್ಷಿತಿಸುತೆ ಶ್ರೀಗೇ ||
ಸಮಾನ ಪತಿಗೆ ನಾರಾಯಣ ಸತಿಯರಾರತಿಯೆತ್ತಿ |
ಸ್ತುತಿಸಿದ ರಂದಮರ ಅರಶಿಣ-ಹಚ್ಚುವಳೂ...||

****

ಜಯ ಜಯಾ ವೆಂಕಟರಾಯ | ಜಯ ಜಯಾ ಸುಂಸರ ಕಾಯಾ |
ಜಯ ಜಯಾ ಲಕ್ಷ್ಮೀ ಪ್ರಿಯಾ | ಜಯ ಜಯಾ ಮಹರಾಯಾ ||
ಎನ್ನರಸಾ ಘನ್ನರಸಾ | ಎನ್ನಾ ಪ್ರಾಣದಾ ಅರಸಾ |
ನಿಮ್ಮ ಮುಖವಾ ತನ್ನೀ | ಎಣ್ಣೆ ಅರಶಿಣ ಹಚ್ಚುವೆವೂ...||
ಉಣ್ಣಾನೆ ಮೆಲ್ಲಗೆ ಪೋಗಿ ಕಣ್ಣಿಗೆ ಬೀಳದೆ ಕದ್ದು |
ಬೆಣ್ಣೆ ತಿನ್ನುವ ಮುಖಕೆ ಅರಶಿಣ ಹಚ್ಚುವೆವೂ...||
ಅಂಜದೆ ಹೇಸಿಗೆಯಾದ| ಕುಜಸಾಬನ ಶಬರಿ |
ಎಂಜಲ ಕೈಗೆ ಅರಶಿಣ ಹಚ್ಚುವೆವೂ..||
ವಲ್ಲಭ ನೀವನ ಕೈಲಿ ಕಲಲಿತಾಡಿತವಾಗಿ | ಬಲ್ಲಿದ ನಿಮ್ಮಯಾ
ಪಣೆಗೆ ಅರಶಿಣ ಹಚ್ಚುವೆವೂ....||
ಎದೆಯ ಮೇಲೊಬ್ಬಳು ಇರಲು | ಹದಿನಾರು ಸುದತಿಯರಪ್ಪಿದ |
ಎದೆಗೆ ಪರಿಮಳದ ಎಣ್ಣೆ ಅರಶಿಣಾ ಹಚ್ಚುವೆವೂ....||
ಪಗಲೆಲ್ಲಾ ಗೋಪಿಯರ | ಹೆಗಲ ಮೇಲಿಟ್ಟಿರುವ ಕೈಗೆ | ಗಂಧದ |
ಪರಿಮಳದ ಎಣ್ಣೆ ಅರಶಿಣ ಹಚ್ಚುವೆವೂ....||



****

ಶರಣು ಲೋಕನಾಯಕ ವೆಂಕಟೇಶಗೆ | ನೀ ಕರುಣಿಸಿ ಸಲಹೋ ದೇವಾ |
ದೇವಾ | ಜಯ ಜಯ ರಾಮ ಜಯ ರಾಮಾ ||
ಪಟ್ಟೆ ಪಿತಾಂಬರ ನೆರೆದುಟ್ಟು | ವೀಣೆ ಕಸ್ತೂರಿ ಫಣೆಯೊಳು ತೊಟ್ಟು |
ಜಾಣೆಯರೆಲ್ಲಾ ನೆರೆ-ದಾರು || ಸುಂದರನಾದ ಬಾಣದ ಪಟ್ಟದಾನೆಗಳಂತೆ |
ಜಯ ಜಯ ರಾಮಾ-ಜಯಾ -ರಾಮಾ ||
ಮದುವೆಯ ನಾಲ್ಕು ದಿನಗಳಲ್ಲಿ | ಮದುವಣಿಗ ಸೀತಾ-ರಾಮರಿಗೆ
ಮುದದಿಂದಾ | ಎಣ್ಣೆ ಅರಶಿಣವ ಮಾಳ್ಪ ಸಂಭ್ರಮವ ಕೇಳಿ |
ಜಯ ಜಯ ರಾಮಾ-ಜಯಾ-ರಾಮಾ||
ಬ್ರಹ್ಮನ ಪತ್ನಿ ಸರಸ್ವತಿ ದೇವಿ | ವಾಯು ರುಕ್ಮಿಣಿ ದೇವಿ | ಹರನಲ್ಲ ದೇ
ಪಾರ್ವತಿದೇವಿ ಸಹಿತ | ಅರಶಿಣ ಎಣ್ಣೆಯ ಶಾಸ್ತ್ರ ಮಾಡಬಂದ-ರಾಗಾ-|
ಜಯ ಜಯ ರಾಮಾ-ಜಯಾ- ರಾಮಾ ||
ಹರುಷದಿಂದಲಿ ಕೌಸಲ್ಯೆ ಕೈಕೆಯಿ ಸುಮಿತ್ರೆಯರು | ಶ್ರೀ ರಾಮ
ಚಂದ್ರರಿಗೆ| ಎಣ್ಣೆ ಅರಶಿಣವ ಮಾಡಿದರಾಗಾ || ನಿಸ್ತ್ರೆ ಸುಮಿತ್ರೆದೇವಿ
ಕೇರಿಕೇರಿಯಲ್ಲಿದ್ದ -ನಿಸ್ರೆಯರನ್ನೆಲ್ಲಾ ಕರೆಯಿಸಿದಳೂ-||
ಜಯ ಜಯ ರಾಮಾ-ಜಯಾ-ರಾಮಾ||
ಕುಸುಮ ಬಾಣಕ್ಕೆ ಮಾರ್ಜಾಲದಂತೆ ದಶರಥನ ಅರಮನೆಯಲ್ಲಿ |
ಬಣ್ಣ ಬಣ್ಣದ ಪಟ್ಟೆಯನುಟ್ಟು | ಪುತ್ರಂಗಿಗಳ ತೊಟ್ಟು ಮಿನುಗುವ
ಮುಸುಕವನ್ನುಟ್ಟು | ಪರಿಮಳ ತುಂಬಿ ನಿಂದಾರು-ಅರಮನೆಯಲ್ಲಿ ||
ಜಯ ಜಯ ರಾಮಾ | ಜಯಾ -ರಾಮ ||
ಅಲ್ಲಿಗೆ ಅಲ್ಲಿಗೆ ಪಿಡಿಹೊನ್ನು ಚೆಲ್ಲುವ | ದಶರಥ ಸುತನ ನಡೆತಂದು|
ಹೊಂಬಣ್ಣದ ಅರಶಿಣವ ಕಲಸಿ ತುಂಬಿದರು,| ಪರಿವಾಣದಲ್ಲಿ ಅಂಬುಜ
ಪಿತ ಶ್ರೀರಾಮರಿಗೆ | ಜಯ ಜಯ ರಾಮಾ | ಜಯಾ ರಾಮಾ ||
ತುಡುಕುವ ತಮ್ಮಟೆಗಳು | ಭೇರಿ ನಿಶಾನೆಗಳು ಒಡವೆ ತೂಗುವ |
ಕೊಂಬುಗಳು ಸೇರಿ ಗರ್ಜಿಸುವಾ | ಪಂಚ ವಾದ್ಯಗಳು | ತುಂಬಿದುವು |
ಜನಕನ ಅರಮನೆಯಲಿ | ದಿಕ್ಕು ದಿಕ್ಕಿನ ರಾಯರುಗಳಿಗೆ | ರತ್ನಗಂಬಳಿ ಹಾಸಿ
ಸತ್ಕರಿಸಿದರು | ಜಯ ಜಯ ರಾಮಾ | ಜಯಾ ರಾಮಾ ||
ಬ್ರಹ್ಮ ಹರಿಹರ ಇಂದ್ರರು ವಿಸ್ತಾರದ ಮಂಟಪದಲಿ ಸೇರಿ | ಹರುಷದಲಿ
ಹರಸಿದರು| ಮಣಿ ಮಂಟಪದಲಿ ಹಸೆಗಿಕ್ಕಿ | ಕನಕದ ಮಣೆಯನ್ನು ತಂದಿರಿಸಿ|
ಇನಕೂಲ ರಾಮನ ಹಸೆಗೇಳೆಂದು | ವಿನಯದಿಂದ ಕೌಸಲ್ಯ
ಕರೆತಂದಳಾಗ | ಜಯ ಜಯ ರಾಮಾ ಜಯಾರಾಮಾ ||
ಬೇಗದಿ ಉಡುಗೆ ಹಾಗೆ | ಆಗಲೇ -ಉಪಚಾರಮಾಡಿ
ಭಾಗ್ಯದಾರತಿಯಾ ಬೆಳಗಿದರು | ಪಾರ್ವತಿ ಸಹಿತ ನಾರಾಯಣನರಸಿ
ಸೀತಾರಾಮರಿಗೆ ಜಯ ಜಯ ರಾಮಾ | ಜಯಾ-ರಾಮಾ-||

# ಎಣ್ಣೆ ಅರಶಿನ ಹಾಡು

ಶಿವ-ಶಿವಾ- ಜಯ ಜಯಾ ಶ್ರೀ ಗೌರೀ .... ಮನೋಹರ
ಕಾರುಣ್ಯ ಸಾಗರ- ಕರುಣಾವರ ಸತಿಯೇ .....||
ಮದುವೆಯಾ- ಮಂಟಪಕೆ... ಕದಳಿಯ ಕಂಬವಿರಿಸಿ|
ನಿಸ್ತ್ರೀಯರು ಮದು ಮಗಳಾ... ಸೋಬನಕೆ|| ಶ್ರೀ ಗೌರೀ...ಮನೋಹರ||

ನೆಲ್ಲಕ್ಕಿ ನಡುಬಾಡೆ... ದೀವಿಗೆ ಎದುರಲ್ಲಿ |
ಅಕ್ಕಿ-ಯಾ ಹಸೆಬರೆದು|ಬಣ್ಣದ ಚಾಪೆಹಾಸಿ||
ಹಸೆಮೇಲೆ ವೀಳ್ಯವಿಟ್ಟು | ಗಂಧದ ಮಣೆಮೇಲೆ
ವೀಳ್ಯವ ಹಿಡಿದು ಕುಳಿತಿರುವ ಮದುಮಗಳು ನೀನೀಗಾ ||

ಪಾರ್ವತಿ ಮದುವೆಗೆ| ಊರೆಲ್ಲಾ ಸಿಂಗಾರ|
ಬಾಳೆಯ ತೋರಣ ಬಾಗಿಲಿಗೆ ಸಿಂಗಾರ|| ಶ್ರೀ ಗೌರೀ ... ಮನೋಹರ||
ಪರಶಿವನು ಬರುತಾನೆ ತಾಳಿಯ ಕಟ್ಟುತಾನೆ
ಶ್ರೀದೇವಿ ಜಲದೇವಿ ಕಾವೇರಿ ಮಾತಾಯೇ....||

ತಾವರೆ ಮೇಲಿರುವ ಲಕ್ಷ್ಮಿಯು ನೀನೀಗಾ....
ಸೋಬನಕೆ ಕುಳಿತಿರುವ ಮದುಮಗಳು ನೀನೀಗಾ...||
ವೀಣೆಯ ಹಿಡಿದಿರುವ ಶಾರದೆ ದೇವಿಗೆ||
ಪಾರಿಜಾತ ಮುಡಿದಿರುವ ಪಾರ್ವತಿ ದೇವಿಗೆ|| ಶ್ರೀ ಗೌರೀ ...ಮನೋಹರ||

ಬೆಳ್ಳಿಯ-ಮುಕ್ಕಾಲು ಚಿನ್ನಾದ ಎಣ್ಣೆ ಚರುಕು|
ಬಣ್ಣಕ್ಕೆ ಅರಶಿಣ ಛಾಯೆಗೆ ಎಣ್ಣೆಯ ಕಲಸಿ ||
ಒತ್ತಿದರು ನಾರಿಯರು| ವೀಳ್ಯವ ಹಿಡಿದಿರುವ
ಮದುಮಗಳಾ... ರಜಮುಖಕೆ ತೀಡಿದರು ನಾರಿಯರು ||
ಶಿವ...ಶಿವಾ... ಜಯ ಜಯಾ... | ಶ್ರೀ ಗೌರೀ... ಮನೋಹರ||
ಕಾರುಣ್ಯ ಸಾಗರ ಕರುಣಾವರ ಸತಿಯೇ...||

# ಎಣ್ಣೆ ಶಾಸ್ತ್ರದ ಸೋಬಾನೆ

ಸೋಬಾನೆ ಸತಿಗೊಂದು | ರಾಗಕೆ ಚಿಂತಾಮಣಿಯೆ
"ಓ" ಎಂಬ ಸ್ವರವು ಒಳಗಿಂದ || ಮುದ್ದು ಮುಖವೆ
ಎದ್ದು ಸೋಬನಕೆ ದನಿತೋರೆ ||

ಮೂಡಂದ ತರುಸ್ಯಾರು ಆರುಸೇರು ಅರುಶಿಣವಾ
ಮೂಡಣ ಬಿಸುಲಿಗೆ ಒಣಹಾಕಿ ಹರವಿ |
ಪಡುವಣ ಬಿಸುಲಿಗೆ ಎತ್ತಿ ತಂದು ||

ಮೂಡಂದ ತರುಸಿದಾ ಮೂರು ಸೇರು ಅರುಶಿಣವಾ
ತೆಂಕಣ ಬಿಸುಲಿಗೆ ಒಣಹಾಕಿ ಹರವಿ |
ಪಡುವಣ ಬಿಸುಲಿಗೆ ಎತ್ತಿ ತಂದು ||

ಕಲ್ಲಾ ಒರಳಲ್ಲಿ ಕುಟ್ಟಿ ನಾರಿಯರು |
ಆರುಶಿಣವ ಹುಡಿಮಾಡಿ ಎತ್ತಿ ತಂದು |
ಕಂಚಿನ ಬಟ್ಟಲಲ್ಲಿ ಮಡುಗಿದರು ||

ಮೂಡಣ ಬಯಲಲ್ಲಿ ವಾಲಾಡಿ ಬೆಳೆದಂತ...
ಗರಿಕೆ ಹುಲ್ಲನು ಕೊಯ್ದು ತಂದು ತಂಗಿಯರು |
ಚಿನ್ನದ ಎಣ್ಣೆ ಚರುಕಲ್ಲಿ ಮಡುಗಿದರು ||

ಎಣ್ಣೆ ಶಾಸ್ತ್ರಕ್ಕೆ ಯಾರ್‍ಯಾರು ಬರಬೇಕು ?
ತಾಯಿ ಸೋದರದ ಹಿರಿಅತ್ತೆ |
ತಂದೆ ಸೋದರದ ಹಿರಿ ಅಕ್ಕ ಬಂದರೆ|
ಚಂದವಾಗಿ ಶಾಸ್ತ್ರವ ಮಾಡುವರು ||

ಚಿನ್ನದ ಎಣ್ಣೆ ಚರುಕಲ್ಲಿ ಹೊಯ್‌ದಿಟ್ಟ ಎಣ್ಣೆಗೂ |
ಕಂಚಿನ ಬಟ್ಟಲಲ್ಲಿ ಮಡುಗಿದ ಅರುಶಿಣಕು |
ರಜ ವುಂಟೆಂದು ತಿಳಿದು ನಾರಿಯರು ||

ದೀವಿಗೆಗೆ ಅಕ್ಕಿ ಹಾಕಿ ಕೈಮುಗಿದು ಕನ್ಯೆಗೆ|
ವೀಳ್ಯವ ಕೊಟ್ಟು ಗರಿಕೆ ಶಾಸ್ತ್ರವ ಮಾಡಿ |
ಎಡಭುಜಕೆ ತೀಡುವರು ಬಲಭುಜಕೆ ತೀಡುವರು |

ಕನ್ಯೆಯ ಮೈಯಾ ನೋಯಿಸದೆ ನಾರಿಯರು |
ಹಾಡಿ ಹರಸಿದರು | ಶಿವ ಶಿವ ನಿನಗೆ ಜಯವೆಂದು |
ಹಾಡಿ ನೀರ ಭೋಜನಕೆ ನಡೆದಾರು ||

****

# ಮುಖ ಕ್ಷೌರ ಮಾಡುವಾಗ

ಅಂಗಳ ಸಾರಿರಿಸಿ | ರಂಗೋಲೆ ಬರೆದಿರುಸೀ...|
ಮಂಟಪ ಸಿಂಗರಿಸಿ | ಚಿತ್ತಿರ ಬರೆದಿರುಸೀ...|
ರಾಯಾವಣ್ಣಯ್ಯನಾ ಚವರಕ್ಕೇ - ||
ಸಮರಾತ್ರಿಯಲೆದ್ದು | ಕೆನೆ ಮೊಸರೂಟವ ಮಾಡಿ |
ನಾದಿಗನಾ ಮನೆಗೆ ಹೊರಟಾನು ಅಣ್ಣಯ್ಯಾ |
ನಾದಿಗ ನಾದಿಗನೆಂದು ಕರೆದಾನು -|
ಒಂದು ಕರೆವಾಗ ಆಲಿಸಾನು ನಾದಿಗ |
ಎರಡೊಮ್ಮೆ ಕರೆವಾಗ ಓಯೆಂದು ಓಗೊಂಡು |
ಕೈಯೆತ್ತಿ - ಶರಣು ಮಾಡ್ಯಾನು ||
"ಏನಾಗಿ ಬಂದಿರಿ ಸ್ವಾಮೀ? ಎಂತದಾಗಿ ಬಂದಿರಿ ಸ್ವಾಮಿ ?
ಬಂದಂತಹ ಕಾರ್ಯಗಳ ತಿಳು-ದ್ಹೇಳಿ |"
ನಾಳೆ ನಮ್ಮರ ಮನೆಲಿ ಕಂದಯ್ಯಗೆ ಸೋಬಾನ
ನಾದಿಗನಿಲ್ಲದೆ ಮದು -ವಿಲ್ಲಾ-||
ಬರುತೇನೆ ನಮ್ಮ ಸ್ವಾಮೀ | ಬರುತೇನೆ
ನಮ್ಮ ಸ್ವಾಮೀ | ಕೈಯೆತ್ತಿ ಶರಣು ಮಾಡ್ಯಾನು ||
ಸಮರಾತ್ರಿಯಲೆದ್ದು ಕೆನೆ ಮೊಸರೂಟವ ಮಾಡೀ -
ಚೆನ್ನಾ ಡುಪುಗಳಾ ತೆಗೆದಾನು ನಾದಿಗ |
ಮದುವೆಯರ ಮನೆಗೆ ನಡೆದಾನು...|
ಆಗ್ಲೇ ಬರಹೇಳಿ - ಬಹಳ- ತಡವಾಯ್ತು
ಪ್ರೀತಿಲ್ಯೊ ನಿನಗೆ ಮನದಲ್ಲಿ ?
ಆಗ್ಲೇ ಬಂದೇನು - ಬಾಗಿಲಲಿ ನಿಂದೇನು |
ಬಾಗಿಲವರೆನ್ನಾ ತಡೆದು ಮಾತನೆ ಆಡಿ |
ಅಲ್ಲೊ ಒಂದರಗಳಿಗೆ ತಡವಾದೊ || ದೊರೆಗಳಿರಾ |
ಚವರದಾ ಕೆಲಸ ಬೇಗನಾಗ್ಲಿ ||
ಒಂದು ಚಿನ್ನಕ್ಕೆ ಒಂಬತ್ತು ಚಿನ್ನದ ಕೋಟೆ |
ಸುತ್ತೀನಾ ಒಳಗೆ ಮುಖ ತೋರು ಅಣ್ಣಯ್ಯಾ |
ಚವರ-ದಾ ಕೆಲಸ ಜತನಾಗ್ಲಿ....||
ಹನ್ನೆರಡು ಚಿನ್ನಕ್ಕೆ | ಹನ್ನೆರಡು ಸುತ್ತಿನ ಕೋಟೆ |
ಸುತ್ತೀನಾ ಒಳಗೆ ಮುಖ ತೋರು ಅಣ್ಣಯ್ಯಾ |
ಚವರ-ದಾ ಕೆಲಸ ಜತನಾಗ್ಲಿ...||

ಬಲಕೆನ್ನೆ ಒತ್ತುವನು | ಬಲ ಕೆನ್ನೆಗೆ ಮಿಂಚಿಡುವನು |
ಬಲಕೆನ್ನೆಯೊಳಗೆ ಕಸ ಕಪ್ಪುವುಳಿದರೆ ಅಕ್ಕಿ-ಯಾ ವಾಜ ನಿನಗಿಲ್ಲಾ... ||
ಬಲಕೆನ್ನೆ ಒತ್ತುವೆನು | ಬಲಕೆನ್ನೆಗೆ ಮಿಂಚಿಡುವೆನು |
ಬಲಕೆನ್ನೆಯೊಳಗೆ ಕಸಕಪ್ಪು ಬಿಡೋನಲ್ಲಾ - ಅಕ್ಕೀಯಾ ವಾಜ ನನಗುಂಟು... ||
ಕೈ ಉಗುರೊತ್ತುವನು | ಕೈ ಉಗುರಿಗೆ ಮಿಂಚಿಡುವನು |
ಕೈ ಉಗುರಿನೊಳಗೆ | ಕಸಕಪ್ಪು ವುಳಿದರೆ ವಸ್ತ್ರ-ದಾ ವಾಜ ನಿನಗಿಲ್ಲಾ... ||
ಕೈ ಉಗುರೊತ್ತುವೆನು | ಕೈ ಉಗುರಿನೊಳಗೆ ಮಿಂಚಿಡುವೆನು |
ಕೈ ಉಗುರಿನೊಳಗೆ ಕಸಕಪ್ಪು ಬಿಡೋನಲ್ಲಾ ವಸ್ತ್ರದಾ ವಾಜ ನನಗುಂಟು...||
ಕಾಲುಗುರೊತ್ತುವನು | ಕಾಲುಗುರಿಗೆ ಮಿಂಚಿಡುವನು |
ಕಾಲುಗುರಿನೊಳಗೆ ಕಸಕಪ್ಪುವುಳಿದರೆ ಹಣದ ವಾಜ ನಿನಗಿಲ್ಲಾ -||
ಕಾಲುಗುರೊತ್ತುವೆನು | ಕಾಲುಗುರಿಗೆ ಮಿಂಚಿಡುವೆನು |
ಕಾಲುಗುರಿನೊಳಗೆ ಕಸಕಪ್ಪು ಬಿಡೋನಲ್ಲಾ ಹಣದಾ-ವಾಜ ನನಗುಂಟು...||

ನಾದಿಗ=ಕ್ಷೌರಿಕ

****

# ಎಣ್ಣೆಯ ಹಾಡು

ಆರುಮಣ ದೊಡ್ಡೆಳ್ಳು ತಂದು | ಕೇರಿಗಾಣಕೆ ಸೋರಿದು |
ನಾರಾಯಣ ಶಿವ ಎಂಬೊ ಎರಡೆತ್ತುಗಳ || ತಿರುಗಿಸಿದೆಣ್ಣೆ
ನಾರಿಯವರ ಕೈಗೆ ದೊರಕಿ...ತು ||
ಮೂರು ಮಣ ಸಣ್ಣೆಳ್ಳು ತಂದು | ಊರುಗಾಣಕೆ ಸೋರಿದು
ಶಿವ, ರಾಮ ಎಂಬೊ ಎರಡೆತ್ತುಗಳ || ತಿರುಗಿಸಿದೆಣ್ಣೆ
ನಾರಿಯವರ ಕೈಗೆ ಬಂದಿ...ತು ||
ನಾರಿಯವರ ಕೈ ಬೆರಳಿಗೆ ಆ ಎಣ್ಣೆ ಬಂದಾಗ
ಚಿಲಿ ಪಿಲಿ ಎಂದಾವು ಗಿಳಿ ಹಿಂಡು ||
ಹವಳ ಹವಳದ ನೀರು ಕಾವೇರಿ ನದಿ ನೀರು |
ಹವಳ ಸಾಗರದ ಪಾತಾಳದ ಪನ್ನೀ...ರು ||
ಕಾವೇರಿ ನದಿ ನೀರು ಜಳಜಳ ಎಂದಾಗ
ಮುತ್ತೈದೆರೈವರು ಮೀಸಿದರು ||
ಪಾತಾಳದ ನೀರು ಜಲವುಕ್ಕಿ ಬಂದಾಗ
ಮುತ್ತೈದೆರೈವರು ಎರೆದಾರು ||

****

# ಸ್ನಾನ ಮಾಡಿಸುವಾಗ

ಮೂಡಕ್ಕೆ ಮುಖಮಾಡಿ ಆಯದಲಿ ಒಲೆ ಕೊರೆದು
A‡ A¸ÀjDz; ¹ ¥ÀAÕZ†|| ಕಾಸಿದ ನೀರು
ಊರು ಮಾಲಿಂಗನ ಮಗ ಮೀದ ನೀರು ||
ತೆಂಕದ ಗುಡ್ಡಂದ ಹರಿದೋಯ್ತು ||
ತೆಂಕದ ಗುಡ್ಡಂದ ಹರಿದಾ ನೀರಲ್ಲಿ ನಿಂಬೆವಾಲಾಡಿ ಬೆಳೆದಾವು ||

ಅಂದದಲಿ ಒಲೆ ಮಾಡಿ ಚಂದದಲಿ ಒಲೆ ಕೊರೆದು
ಶ್ರೀಗಂಧದಾ ಸೌದೆ ದಳವೊಡ್ಡಿ | ಕಾಸಿದ ನೀರು
ಊರು ಮಾಲಿಂಗನ ಮಗ ಮೀದ ನೀರು
ತೆಂಕದ ಗುಡ್ಡಂದ ಹರಿದೋಯ್ತು ||
ತೆಂಕದ ಗುಡ್ಡಂದ ಹರಿದಾ ನೀರಲ್ಲಿ ಕಿತ್ತಳೆವಾಲಾಡಿ ಬೆಳೆದಾವು ||

ಅಂದದಲಿ ಒಲೆಮಾಡಿ ಚಂದದಲಿ ಒಲೆಕೊರೆದು
ಶ್ರೀಗಂಧದಾ ಸೌದೆ ದಳವೊಡ್ಡಿ || ಕಾಸಿದ ನೀರು
ಊರು ಗೌಡರ ಮಗ ಮೀ......ದಾ......... ನೀರು
ನೀಲದ ಬಚ್ಚಲಿಂದ ಹರಿದೋಯ್ತು ||
ನೀಲದ ಬಚ್ಚಲಿಂದ ಹರಿದಾ ನೀರಲ್ಲಿ ಬಾಳೆವಾಲಾಡಿ ಬೆಳೆದಾವು ||

ಆಯದಲಿ ಒಲೆಮಾಡಿ ಜಾಯದಲಿ ಒಲೆ ಕೊರೆದು
ನಂದಿಯ ಸೌದೆ ದಳವೊಡ್ಡಿ || ಕಾದಾ ನೀರು
ಊರುಗರತಿಯ ಮಗ ಮೀದ ನೀರು
ತೆಂಕಣ ಗುಡ್ಡಂದ ಹರಿದೋಯ್ತು ||
ತೆಂಕಣ ಗುಡ್ಡಂದ ಹರಿದಾ ನೀರಲ್ಲಿ ಕಿತ್ತಳೆವಾಲಾಡಿ ಬೆಳೆದಾವು ||

ಕಡ್ದಾಯದ ನೀರು ದಳದಳನೆ ಕಾದಾವೊ
ಮುಡುವಾಳ ಪಚ್ಚೆತೆನೆ ಗಮನಕೆ ||
ಕಾದಾ ನೀರು ಎರೆಯಿರಿ ಮಾಶಿವನ ಮಗನಿಗೆ ||
ಹಂಡೆಯ ನೀರು ಕೊತಕೊತನೆ ಕಾದಾವೊ
ಮುಡುವಾಳ ಪಚ್ಚೆತೆನೆ ಗಮನಕೆ ||
ಕಾದಾ ನೀರು ಎರೆಯಿರಿ ಗೌಡರ ಮಗನಿಗೆ ||

****

# ಸ್ನಾನ ಮಾಡಿಬರುವಾಗ

ಅಕ್ಕ ತಂಗಿಯರು ಕೂಡಿ ಮದು ಮಕ್ಕಳಿಗೆ
ದೃಷ್ಟಿಗೆ ಆರತಿಗಳ ಬೆಳಗಿದರು॥

ಹಣೆಗೆ ಗಂಧವಿಟ್ಟು। ಸಂಭ್ರಮದಿಂದಲಿ
ಕುಶಲಾ ದಾರತಿಯ ಬೆಳಗಿದರು॥

ಗಂಗೆ ಪೂಜೆಯ ಮುಗಿಸಿ। ಮೆಟ್ಟಿಲನೇರುವಾಗ
ಕುಂಕುಮದಾರತಿಯ ಬೆಳಗಿದರು॥

ಹಣೆಗೆ ಬೊಟ್ಟಿಟ್ಟು। ನಗುತ ನಾರಿಯರು
ತೆಂಗಿನ ಕಾಯಾರತಿಯಾ ಬೆಳಗಿದರು॥

*****

ಹಣೆಯಲಿ ಬಾಸಿಂಗ ಕೊರಳಲಿ ಕಾಸ್ತಾಳಿ
ಮುಸುಕು ವಲ್ಲಿಯ ಮದುಮಗಳೆ॥
ಹಸೆಗೆ ಬಾ ಎಂದು ಆರತಿ ಬೆಳಗಿದರು॥

ಹಸೆಗೆ ಬಾರೆಂದು ಭಾಮಿನಿ ಸತಿಗೆ
ಅತ್ತಿಗೆ ನಾದಿನಿಯರು ಬಿಂಕದಲಿ ಬಂದು
ಹಸೆಗೆ ಬಾ ಎಂದು ಆರತಿ ಬೆಳಗಿದರು॥

ನಾಗಶಯನನು ವೇದವ ಬಲ್ಲವ
ಸುಮಧುರ ಕೊಳಲಿನ । ಕರೆಯವನು
ಪತಿಯಾದ ಬೇಕೆಂದು ಭಾಗ್ಯದಾರತಿಯ ಬೆಳಗಿದರು

*****

# ಕಳಸ ಕನ್ನಡಿ ಹಿಡಿಯಲು ಅಕ್ಕನ ಕರೆಯುವಾಗ

ನಮ್ಮ ವರ-ಅರಮನೆಲಿ ಸಣ್ಣ ವಂಗೆ ಸೋಬಾನ|
ಅಕ್ಕನ ಕರೆಯಲಿಕೆ ಹೋಗೋದಾರು, |ತಂದೆಪ್ಪ, ಹೋಗೋದಾರು ?
ಎಳಾಳಿಗಿಂತ ಹಿರಿಯಣ್ಣ ಹೋಗಬೇಕು ಮಗನೇ-ಅಕ್ಕನ ಕರೆಯಲಿಕೆ ಹೋಗಬೇಕು |
ಸೂಡಿ ಸೂಡಿ ವೀಳ್ಯವ ತೆಗೆದಾನು ಅಣ್ಣಯ್ಯ |
ಕೀಲು ಕೀಲೆ ಅಡಿಕೆ ತೆಗೆದಾನು | ಅಕ್ಕನ ಕರೆಯಲಿಕೆ
ಹೊರಟಾನು ಅಣ್ಣಯ್ಯ | ವೀಳ್ಯವ ತಕ್ಕೊಂಡು ಹೊರಟಾನು |
ಸಣ್ಣಕ್ಕಿ ಬಯಲಲ್ಲಿ ನಡೆದಾನು ಅಣ್ಣಯ್ಯಾ | ಅಕ್ಕಾನರ ಮನೆಗೆ
ನಡೆದಾನು || ಎದುರೀಗೆ ಹಾಲು ನೀರು ತಂದಾಳು ಹಿರಿಯಕ್ಕಾ ||
ನೀರನ್ನೆ ತೆಗೆದು ಕೈಕಾಲು ಮುಖ ತೊಳೆದು ಹಾಲನ್ನೆ ಕುಡಿದು
ಬಾಯಾರಿಕೆ ಕಳೆದು | ತೂಗುವ ಮಂಚದಲೀ-ಕೂತಾನೀಗಾ ||
ವೀಳ್ಯವ ಕೊಟ್ಟ್ಯಾಳು ಅಕ್ಕಯ್ಯ | ವೀಳ್ಯವ ಮೆದ್ದ್ಯಾನು | ಅಣ್ಣಯ್ಯಾ
ಬೆಳ್ಳಿಯ ಹರಿವಾಣ ತೆಗೆದು | ವೀಳ್ಯವನಿರಿಸಿ ನುಡಿದಾನು ಅಣ್ಣಯ್ಯಾ |
ನಮ್ಮರಮನೆಲಿ ಸಣ್ಣ ವಂಗೆ ಸೋಬಾನ | ಕಳಸ ಕನ್ನಡಿ
ಹಿಡಿಯಲಿಕೆ ಬರಬೇಕು ಅಕ್ಕಯ್ಯ ಅರ-ಮನೆಗೆ||
ಕಡಿಕೆ ಭತ್ತವ ಬಿಟ್ಟು, ತುಡಿಕೆ ಹೊನ್ನನು ಬಿಟ್ಟು,
ನಾನ್ಹೇಗೆ ಬರಲಿ ತಮ್ಮಾ ಮದುವೇಗೆ ?
ಕಡಿಕೆ ಭತ್ತಕೆ ಕಾವಲಿಗೆ ಜನ ಕೊಡುವೇ-
ಬಾರಕ್ಕಾ ಮನೆಯಾ ಮದುವೇಗೆ ||
ದೇವರಂತಹ ಮಾವನ ಬಿಟ್ಟು | ಪಶುವಿನಂತಹ ಅತ್ತೆಯಬಿಟ್ಟು |
ನಾನ್ಹೇಗೆ ಬರಲಿ ತಮ್ಮ ಮದುವೇಗೆ ||
ದೇವರಂತಹ ಮಾವ ಅತ್ತೆಯವರಿಗೆ ದಂಡಿಗೆ ನಾ ಕೊಡುವೆ|
ಬಾರಕ್ಕಾ ನಮ್ಮಾ ಅರಮನೆಗೆ ||
ಬಾಳೆಯ ಸುಳಿಯಂತಹ ಪುರಷನ ಬಿಟ್ಟು | ಗೆಜ್ಜೆ ಕಾಲು ಕುವರನ
ಬಿಟ್ಟು, ನಾನ್ಹೇಗೆ ಬರಲಿ ತಮ್ಮಾ ಮದುವೇಗೆ ?
ಬಾಳೆ ಸುಳಿಯ ಪುರುಷನಿಗೆ ಕುದುರೆಯಾ ನಾ ಕೊಡುವೆ |
ಬಾರಕ್ಕಾ ಮನೆಯಾ ಮದುವೇಗೆ ?
ಕರೆಯುವವರು ಯಾರೂ ಇಲ್ಲ | ಕಾಸುವವರು ಯಾರು ಇಲ್ಲ
ನಾನ್ಹೇಗೆ ಬರಲಿ ತಮ್ಮಾ-ಮದುವೇಗೆ ?

ಒಂದು ವೀಳ್ಯವ ಕೊಡುವಲ್ಲಿಂದಾ ಎರಡು ವೀಳ್ಯವ ಕೊಟ್ಟು |
ನೆರಮನೆಯಕ್ಕಂದಿರಾ ಕರೆಸಿಕೋ ತಮ್ಮಾ | ಮದುವೇಗೆ ಬರೋದಿಲ್ಲ...|
ಆಕಾಶಕ್ಕೆ ಅಡಿಯುಂಟು ಭೂಮಿಗೆ ದಾರವುಂಟು | ನಿನ್ನ
ಮಾತಿಗೆ ಎಣೆಯಿಲ್ಲಾ | ಎಂದು ಅರಮನೆ ಮೆಟ್ಟಿಲನ್ನೆ
ಇಳಿದಾನು ಅಣ್ಣಯ್ಯಾ | ತಿರುಗಿ ನೋಡದೆ ನಡೆದಾನು ತನ್ನರಮನೆಗೆ ||
ತಾಯವ್ವ ಕೇಳಿದಳು ಅಕ್ಕ ಹಿರಿಯಕ್ಕ ಬರಲಿಲ್ಲವೇ ?
ಎಲೆ ಮಗನೆ-"ಬರಲಿಲ್ಲ" ವೆಂದು ಹೇಳಿ
ನೆರಮನೆಗೆ ಹೋದಾನು ಅಣ್ಣಯ್ಯಾ ||
ಒಂದು ವೀಳ್ಯವ ಕೊಡುವಲ್ಲಿಂದಾ ಎರಡು ವೀಳ್ಯವ
ಕೊಟ್ಟು ಕಳಸ ಕನ್ನಡಿ ಹಿಡಿಯಲು ಬರಬೇಕು
ಅಕ್ಕಂದಿರಾ- ಹಾಗೆಂದು ಹೇಳಿ-ಹೋದಾನಿಗಾ -||
ನೆರೆಮನೆ ಅಕ್ಕಂದಿರು-ಬಂದು ಕಳಸ ಕನ್ನಡಿ -ಹಿಡಿದಾರು
ದಿಬ್ಬಣವನ್ನೇ-ಹೊರಟಾರು ||
ಅಷ್ಟಂಬಾ-ಹೊತ್ತಿನಲಿ ಗೆಜ್ಜೆ ಕಾಲು ಕುವರನು ಸುಂಠಿ
ಸುಳಿಯಾಗೆ ಬಳಕುತ್ತಾ ಶಿಶುಬಾಲೆ | ಬಾನ -ತಕ್ಕೊಂಡು
ಹೊರಟಾಳು ಅಕ್ಕಯ್ಯಾ -ಅರಮನೆಗೇನೆ -ನಡೆದಾಳು ||
ಎದುರಿಗೆ ಹಾಲು ನೀರೂ ಯಾರೂ ತರಲಿಲ್ಲಾ
ಜನವಿಲ್ಲದವಳು ಈಗೇತಕೆ ಬಂದಿದ್ದಿ ?
ಕಡೆಗಣ್ಣ ಕೋಡೀ-ಬಿಟ್ಟಾಳೀಗಾ-ಹಿರಿಯಕ್ಕಾ ||
ಎಲೆ ತಮ್ಮಾ- ನೀಕೇಳು-ಎಲೆ ತಮ್ಮಾ ನೀ ಕೇಳೂ |
ಗೆಜ್ಜೆ ಕಾಲು ಕುವರನು | ಸುಂಠಿಯ ಸುಳಿಯಾಗೆ ಬಳಕುತ್ತಾ
ಹಾಗಾಗಿ ಬಂದೆ ಎಲೆ ತಮ್ಮಾ | ಕಳಸ ಕನ್ನಡಿ ಹಿಡಿಯಲಿಕೆ ಕೊಡಿ ನನಗೆ ||
ಅದು ಏನೂ ಆಗೋದಿಲ್ಲಾ ಎಲೆಯಕ್ಕಾ - ಒಂದು ವೀಳ್ಯವ
ಕೊಡುವಲ್ಲಿಂದಾ ಎರಡು ವೀಳ್ಯವ ಕೊಟ್ಟು ನೆರೆಮನೆಯಕ್ಕಂದಿರಿಗೆ
ಕಳಸ ಕನ್ನಡಿ ಹಿಡಿಯಲಿಕೆ ಕೊಟ್ಟಿದ್ದೇವೆ ||
ಅದು ಏನೂ ಆಗಲಿಕ್ಕಿಲ್ಲಾ ಎಲೆ ತಮ್ಮಾ | ನನಗಾದ್ರೆ
ಕಳಸ ಕನ್ನಡಿ ಹಿಡಿಯಲಿಕೆ ಕೊಡ -ಬೇಕು ||
ಒಂದು ವೀಳ್ಯವ ಕೊಡುವಲ್ಲಿಂದಾ - ಎರಡು ವೀಳ್ಯವ -ಕೊಟ್ಟು
ನೀನವರ ಪಾದಕೆರಗಿ ಶರಣವ ಮಾಡಿ - ಬೇಕಾದ್ದ ಬೇಡಿಕೊ ||

ಒಂದು ವೀಳ್ಯವ ಕೊಡುವಲ್ಲಿಂದ ಎರಡು ವೀಳ್ಯ-ವನ್ನೀಗಾ
ಕೊಟ್ಟಾಳು ಅಕ್ಕಯ್ಯಾ ಶರಣವ-ಮಾಡಿದ-ಳು||
ಕೊಡಲಿಕೆ ಹಿಡಿದ ಕಳಸ-ಕನ್ನಡಿ ಇದುವಲ್ಲಾ
ಹೋಗಕ್ಕಾ ನಾನೀಗಾ -ಕೊಡೋದಿಲ್ಲಾ ||
ಕಡೆ ಕಣ್ಣಾ ಕೋಡಿ ಬಿಟ್ಟಾಳೀಗಾ | ಅಕ್ಕಯ್ಯ ತಾಯಿಯ ಹತ್ತಿರ ನಡೆದಾಳು ||
ತಾಯವ್ವ ನೀವು ಕೇಳೀ -ತಾಯವ್ವ ನೀವು ಕೇಳೀ
ಕಳಸ ಕನ್ನಡಿ ಹಿಡಿಯಲಿಕೆ ಕೊಡಿ -ನನಗೆ||
ಎಲೆ ಮಗಳೆ -ಎಲೆ ಮಗಳೆ | ಕಳಸ ಕನ್ನಡಿ ಕೊಡಿಸೋಕೆ ಆಗೋದಿಲ್ಲಾ |
ನಿನಗೆ-ಐಶ್ವರ್ಯ ಸಿಕ್ಕಿತೆಂದು ಹೆಮ್ಮೆಯಲಿ ತಮ್ಮನನು ಎಲ್ಲಿಗೂ
ಕಾಣಲಿಲ್ಲಾ -| ನನ್ನಿಂದಾಗದ ಕೆಲಸವಿದೂ-ಎಲೆ ಮಗಳೇ -ನಿನ್ನ
ತಂದೆ ಹತ್ತಿರ ಹೋಗಿ ಬೇಡಿಕೊಳ್ಳೀಗಾ ||
ತಂದೆಪ್ಪನವರ ಪಾದ ಹಿಡಿದು ಶರಣವ-ಮಾಡಿದಳು-ಮಗಳು
ಕಡೆ ಕಣ್ಣಾ ದುಃಖಾ-ಬಿಟ್ಟಾಳೀಗಾ ||
ಬೇಸರವೇತಕೆ ಮಗಳೇ-ಒಂದು ಗೊನೆಯಿಂದಾ -ಒಂದು
ಹೂ ವಿನಹಣ್ಣು ಹೋಯ್ತೆಂದು ಮನದಲ್ಲಿ -ನೆನೆದೇವು ||
ಅದು ಏನು ಆಗಲಿಕ್ಕಿಲ್ಲಾ -ತಂದೆಪ್ಪಾ
ಕಳಸ ಕನ್ನಡಿ ಹಿಡಿಯಲಿಕೆ ಕೊಡಿಸಬೇಕು ||
ಹರಿವಾಣ ತುಂಬಾ ವೀಳ್ಯವ ತೆಗೆದುಕೊ ನೀನು | ನೆರೆಮನೆ
ಅಕ್ಕಂದಿರಿಗೆ ಕೊಟ್ಟು, ಅವರ ಕಾಲು ಹಿಡಿದು |
ಶರಣವ ಮಾಡಿ ಕಳಸ ಕನ್ನಡಿ ಬೇಡಿಕೊ ನೀನೀಗಾ-|
ವೀಳ್ಯಾವನ್ನೀಗ ಕೊಟ್ಟು, ಕಾಲು ಹಿಡಿದು ಬೇಡಿದಳು ಅಕ್ಕಯ್ಯ ||
ಕಳಸ ಕನ್ನಡಿ ಕೊಟ್ಟಾರೀಗಾ-|
ಕಳಸ ಕನ್ನಡಿ ಕೊಟ್ಟಾರೀಗಾ | ಕಳಸ ಕನ್ನಡಿ ಹಿಡಿದಳು
ಹಿರಿಯಕ್ಕಾ ದಿಬ್ಬಣವನ್ನೇ ಹೊರಾಟಾರು -||

****

# ಕಳಸ ಕನ್ನಡಿ ಹಿಡಿಯಲು

*ಕಳಸ ತಗೊ ನೀನು । ಕಳೆಯಿರುವ ಮುತ್ತೈದೆ*
*ಕಂಚಿಮಿ ಹಿಡಿ ನೀನು ಬಾರಮ್ಮ ॥*

*ಕಳೆಯಿರುವ ಮುತ್ತೈದೆ । ಕಳಸ ಹಿಡಿ ನೀನು*
*ವರ್ಷಕ್ಕೆ ನೂರು ನಡೆಯಲಿ ಮದುವೆ ॥*

*ಹರಸಿ ತಗೊ ನೀನು ಅಂದದ ಮುತ್ತೈದೆ*
*ತಿಂಗಳಿಗೆ ಇಪ್ಪತ್ತು ಮದುವೆಗೆ ಹರಸು ॥ ಕಳಸ ॥*

*ನೆನೆಯಕ್ಕಿ ಸೆರಗಲ್ಲಿ ಗೊನೆ ಮುರಿದ ಬಾಳೆಹಣ್ಣು*
*ಗಿಡಕೆ ಹೋಗಿ ಮುತ್ತೈದೆರು ಹರಸಿ ಬನ್ನಿ ॥*

*ಸಾಸುವೆ ಕಾಳಷ್ಟು ಕರಿಮಸಿ ತಂದು*
*ಗಂಗೆ ಪೂಜೆ ಮಾಡಿ ಬನ್ನಿ ಮುತ್ತೈದೆರೆ ॥*

*ಕಲ್ಪವೃಕ್ಷ ಎಂಬೊ ತೆಂಗಿನ ಮರದಡಿಲಿ*
*ಫಲತುಂಬಿ ಕೊಡುವ ಹಲಸು ಮಾವು ॥*

*ಹರಸು ಮಾತಾಯಿ ಕಳಸ ತಗೊ ತಾಯಿ*
*ಕಂಚಿಮಿ ಹಿಡಿ ನೀನು ಬಾರಮ್ಮ ॥ ಕಳಸ ॥*

****



# ಗಂಧ ಹಚ್ಚುವಾಗ

ವನವೆ ವನಾ-ಗಜ ಗಮನನೇ| ಅರಳು ಮಲ್ಲಿಗೆ ಹೂವೆ|
ಅರುವತ್ತೊಂದು ವರುಷ ನಿನಗಾಗಿ| ತಪಸಿದೆ
ರಾಯಾ ಗಂಧ ಧರಿಸೋ... ||

ಉತ್ತುತ್ತೇ ಹಣ್ಣೇ ಚಪ್ಪರ ದ್ರಾಕ್ಷಿ ಹಣ್ಣೆ |
ಆರೇಳು ವರುಷ ನಿನಗಾಗಿ ತಪಸಿದೆ|
ರಾಯಾ ಗಂಧ ಧರಿಸೋ... |

ಅರಮನೆ ಗೌರೀ| ಸಡಗರ ಮಹಾಲಕ್ಷ್ಮಿ |
ಅರಳು ಮಲ್ಲಿಗೆ ಹೂವೆ| ಹತ್ತೆಂಟು ವರುಷ
ನಿನಗಾಗಿ ತಪಸಿದೆ ರಾಯಾ ಗಂಧ ಧರಿಸೋ...||

ಹಗಲಿಗೆ ಸೂರ್ಯನು| ಇರುಳಿಗೆ ಚಂದ್ರನು| ಅರಮನೆ
ಪರಂಜ್ಯೋತಿ ನೆರೆಯುವರೇ| ನಮಗೆ ತಾಯಿ ತಂದೆ
ತಕ್ಕಂತವರು| ರಾಯಾ ಗಂಧ ಧರಿಸೋ...||

ಪನ್ನಗಶಯನಾ-ನಿಮ್ಮಾ -ಪದನವ ಹನ್ನೊಂದು |
ವರುಷ ನಿಮಗಾಗಿ ತಪಸಿದೆ|
ರಾಯಾ ಗಂಧ ಧರಿಸೋ -||

****

ಗಂಧವಾ-ನೀಡುವರೆ-ಗಂಗೆಗೂ-ಗೌರಿಗೂ|
ಗಂಗಮ್ಮ ಪಡೆದಾ ಮಗನಿಗೂ|| ಗಂಗಮ್ಮ
ಪಡೆದಾ ಮಗನಿಗೂ ಕಂದಾಗು ಕಸ್ತೂರಿನಿಟ್ಟು ಜಯ ಜಯಾ ||

ಕಸ್ತೂರಿ ನೀಡುವರೆ ಅಚ್ಚ ಕುಮಾರರಿಗೆ|
ಕಸ್ತೂರಿನಿಟ್ಟು ಜಯ-ಜಯಾ|| ಗೌರಮ್ಮ...
ಪಡೆದಾ ಮಗನಿಗೂ ಕಂದಗೂ ಕಸ್ತೂರಿ ನಿಟ್ಟು ಜಯ ಜಯಾ ||

# ಗಂಗೆ ಪೂಜೆ (ಗುಂಭ ಪೂಜೆ)

ಒಂದೆಲೆ ಒಂದಡಿಕೆ ಒಂದೊಂದು ಗಂಧದ ಬೊಟ್ಟು|
ಗಂಗೆ ಗೌರಮ್ಮ ರ ಗುಂಭಕ್ಕೆ ಶಿವಪೂಜೆ|
ಶಿವಪೂಜೆ ಶಿವಗಿರಲಿ ದೇವ ಪೂಜೆ ದೇವಗಿರಲಿ|
ಗಂಗಮ್ಮ ನ ಗುಂಭಕ್ಕೆ ದೇವ-ಪೂಜೆ||

ಕಾಗೆ ಮುಟ್ಟದ ನೀರು | ಜೋಗಿ ... ಸುಳಿಯದ ನೀರು|
ಪಕ್ಷೆ ಪಾತಾಳಾದ ಪನ್ನೀರು||
(ಎರಡೆಲೆ, ಮೂರೆಲೆ, ನಾಲ್ಕೆಲೆ, ಐದೆಲೆ, ಇಪ್ಪರ ತನಕ
ಹೇಳುತ್ತಾ ಗುಂಭಕ್ಕೆ ಸುತ್ತು ಬರುವುದು)

ಅಜ್ಜಯ್ಯ ಕಟ್ಟಿಸಿದ ಅಶ್ವಥದ ಕಟ್ಟೆಯುಂಟೆ
ಅದಕ್ಕೊಂದು ಸುತ್ತು ಬಾರೆ|| ಗಿರಿದೂರ ಮಠದೂರ|
ದೂರದಿಂದಲೆ ಸ್ವಾಮಿಯವರ ಪಾದಕೆ ಶರಣೆಂದೆನು|
ಸ್ವಾಮಿಯವರ ಪಾದಕೆ ಶರಣೆಂದೆನು||

ಅಪ್ಪಯ್ಯ ಕಟ್ಟಿಸಿದ ಹಲಸಿನ ಕಟ್ಟೆಯುಂಟೆ|
ಅದಕ್ಕೊಂದು ಸುತ್ತು ಬಾರೆ|| ಗಿರಿದೂರ ಮಠದೂರ|
ದೂರದಿಂದಲೆ ಸ್ವಾಮಿಯವರ ಪಾದಕೆ ಶರಣೆಂದೆನು||
ಸ್ವಾಮಿಯವರ ಪಾದಕೆ ಶರಣೆಂದೆನು|

ಅಣ್ಣಯ್ಯ ಕಟ್ಟಿಸಿದ ತೆಂಗಿನ ಕಟ್ಟೆಯುಂಟೆ| ಅದಕ್ಕೊಂದು ಸುತ್ತು ಬಾರೆ||
ಬಾವಯ್ಯ ಕಟ್ಟಿಸಿದ ಬಾವಿಯ ಕಟ್ಟೆಯುಂಟೆ| ಅದಕೊಂದು ಸುತ್ತು ಬಾರೆ||
ಗಿರಿದೂರ ಮಠದೂರ ದೂರದಿಂದಲೆ ಸ್ವಾಮಿಯವರ
ಪಾದಕೆ ಶರಣೆಂದೆನು | ಸ್ವಾಮಿಯವರ ಪಾದಕೆ ಶರಣೆಂದೆನು||

****

ಒಂದೆಲೆ ಒಂದಡಿಕೆ| ಒಂದೊಂದು ಗಂಧದ ಬೊಟ್ಟು|
ಗಂಗೆ ಗೌರಮ್ಮ ರ ಶಿವಪೂಜೆಗೆ| ಗಂಗೆ ಗೌರಮ್ಮ ರು
ಶಿವಪೂಜೆ ಮಾಡುವಾಗ ಆಕಾಶದ ಘಂಟೆ ಘಣರೆಂದು ಕೇಳಲು
ಗಂಧದಾ-ಹೊಗೆಯೂ ಘಮ-ಘಮಾ||

ಎರಡೆಲೆ ಎರಡಡಿಕೆ| ಒಂದೊಂದು ಗಂಧದ ಬೊಟ್ಟು
ಗಂಗೆ ಗೌರಮ್ಮ ರ ಶಿವಪೂಜೆಗೆ| ಗಂಗೆ ಗೌರಮ್ಮ ರು
ಶಿವಪೂಜೆ ಮಾಡುವಾಗ ಆಕಾಶದ ಘಂಟೆ ಘಣರೆಂದು ಕೇಳಲು|
ಕರ್ಪೂರದ ಹೊಗೆಯು ಘಮ-ಘಮಾ||

ಒಂದಚ್ಚು-ಬೆಲ್ಲಾ | ಒಂದು ತೆಂಗಿನ ಕಾಯಿ| ಎಳ್ಳು ಬಾಳೆ ಹಣ್ಣು
ಗಂಗೆ ಗೌರಮ್ಮ ರಾ ಶಿವಪೂಜೆಗೆ| ಗಂಗೆ ಗೌರಮ್ಮ ರು
ಶಿವಪೂಜೆ ಮಾಡುವಾಗ -ಆಕಾಶದ ಘಂಟೆ ಘಣರೆಂದು ಕೇಳಲು|
ಸಾಂಬ್ರಾಣಿ ಹೊಗೆಯೂ ಘಮ-ಘಮಾ||

# ಹಸೆಗೆ ಕರೆಯುವ ಹಾಡುಗಳು

ಬ್ರಹ್ಮನ ರಾಣಿಯು ಒಮ್ಮೆಗೆ ಬಲಗೊಂಡು | ನಿರ್ಮಲ ಚಿತ್ತದಿ
ಚರಣ ಕಮಲಗಳಿಗೆ ಎರಗಿ ಪೇಳುವೆನು | ಚಿನ್ನದ ಹಾವುಗೆ ಮೆಟ್ಟಿದ ಪಾದವು
ಚೆನ್ನಾಗಿ ಕರುಣಿಸು ಎಂದೆನುತಾ | ಪಾದಕೆರಗುವೆನು ||

ಎಡಬಲದಲಿ ಸೂರ್ಯ ಚಂದ್ರರು | ಹೊಳೆಯುವ ಜಡೆ ಬಂಗಾರ
ರಾಗುಟಿ ಗೊಂಬೆಗಳು - ಅರಳು ಮಲ್ಲಿಗೆಯಂತೆ ಅರಸಗಳಾಡುತ
ವರಗಳ ಕೊಡುವ ಪಾರ್ವತಿಯಮ್ಮನ ಬರಹೇಳಿ ಹಸೆಗೆ ಕರೆದಾರು ||

ಚಿನ್ನದ ಮಣೆ ಪಂಕಜ ಮುಖಿ ಆಳುವ ಶ್ರೀ ಪಾರ್ವತಿಯಮ್ಮನ
ಬಿಂಕದಲಿ ಹಸೆಗೆ ಕರೆದಾರು ||

ಆನೆಯ ಸೊಂಡಿಲಿಗೆ ಹೋಲುವ ತೋಳಿಗೆ | ಬಾಳೆಯ ಕುಪ್ಪುಸ
ಕೀರ್ತಿ ಇಂತೊಪ್ಪುವ ತೋಳು-ಬಳೆಯ | ಪಾರ್ವತಿಯಮ್ಮ
ಏಳು ನಿಮ್ಮನು ನಿಸ್ತ್ರೈವರು ಹಸೆಗೆ ಕರೆದಾರು ||

ವೇಷದಿ ಬಾವಿಯ ಮೇಲೆ ವೇಷದಿ ಕುಳ್ಳಿರಲು | ಹಸುಳೆ
ಪಾರ್ವತಿ ದೇವಿ ಬಂದು | ಭಜಿಸುವವರಿಗೆ ವರಕೊಟ್ಟು ರಕ್ಷಿಸು |
ಪಾರ್ವತಿಯಮ್ಮ ನಿಮ್ಮನ್ನು ನಿಸ್ತ್ರೀವರು ಹಸೆಗೆ ಕರೆದಾರು ||

ಕಾಶಿಪುರದಿಂದ ನೀವು ಬಂದು | ನೆನೆಸಿದವರಿಗೆ ವರಗಳ ಕೊಟ್ಟು
ರಕ್ಷಿಸು ಪಾರ್ವತಿಯಮ್ಮ | ನಿಮ್ಮನು ನಿಸ್ತ್ರೀವರು ಹಸೆಗೆ ಕರೆದಾರು||

****

ಹಸೆಗೆದ್ದು ಬಾ ನೀಲ ಮೇಘ ಶ್ಯಾಮ ಹಸೆಗೆದ್ದು ಬಾ |
ಜನಕನ ಪುರಕೆ ಹೋಗಿ| ಹರಧನುವ ಮುರಿದ ದೇವ|
ಜಾನಕಿಯ ಕರವ ಪಿಡಿದು| ಭಕ್ತರನು ಪೊರೆವ ದೇವಾ ||

ಮಧುರೆಯಲಿ ಪುಟ್ಟಿದ ಸುತ| ಮಾವ ಕಂಸನಾ ಕೊಂದಾ -ದೇವಾ
ಮಾತಾಪಿತರ ಪೊರೆವ ದೇವಾ | ಹಸೆಗೆದ್ದು ಬಾ...

ಶೃಂಗಾರಶೀಲನೆ ಸಂಗೀತ ಲೋಲನೆ| ರಂಗನಾಯಕಿ ಸಹಿತ ತುಂಗ ಪೀಠಕೆ ಬಾ |
ಅಂಗನೆಯರು ಕೂಡಿ ಮಂಗಳವ ಪಾಡಿ | ಮುತ್ತಿನಾಕ್ಷತೆಗಳ ನೆತ್ತಿಯೊಳಿಡುತಲೀ
ರಂಗ ಬಾ ಎನ್ನುವರು |ಹಸೆಗೆದ್ದು ಬಾ... ನೀಲ ಮೇಘ ಶ್ಯಾಮಹಸೆಗೆ ಬಾ... ||

****

ದೊಡ್ಡಕ್ಕಿ ಕೊಮ್ಮೆಗೆ ಸರಿಯಾಗಿ ನಿಂತವರಾರು | ದೊಡ್ಡ ಗುಂಡಿನಾ
ನೆರಿಯವಳೆ | ದೊಡ್ಡ ಗುಂಡಿನಾ ನೆರಿಯವಳೆ ತಾಯಮ್ಮಾ |
ದೊಡ್ಡಕ್ಕಿ ತಾರಮ್ಮಾ ಹಸೆಹೊಯ್ಯುವಾ ||
ಸಣ್ಣಕ್ಕಿ ಕೊಮ್ಮೆಗೆ ಸರಿಯಾಗಿ ಒರಗಿ ನಿಂತವರಾರು | ಸಣ್ಣ ಗುಂಡಿನಾ
ನೆರಿಯವಳೆ-ತಾರಮ್ಮಾ || ಸಣ್ಣಕ್ಕಿ ತಾರಮ್ಮಾ ಹಸೆ ಹೊಯ್ಯುವಾ ||
ಪುಟ್ಟಕ್ಕಿ ಕೊಮ್ಮೆಗೆ ಸರಿಯಾಗಿ ನಿಂತವರಾರು | ಸಣ್ಣ ಗುಂಡಿನಾ
ನೆರಿಯವಳೇ ಸಣ್ಣಾ ಗುಂಡಿನಾ ನೆರಿಯವಳೇ ತಾರಮ್ಮಾ | ಹಸೆ
ಹೊಯ್ಯುವಾ || ಆ ಊರಿನ ಅಕ್ಕಂದಿರು ಊರಿಗೆ ಬಂದಾಗ |
ಹಸೆ ನೋಡಿ ನಿಮ್ಮಾ ಜರೆದಾರು ||

****

ದಂಡ ಕಾರಣ್ಯದೊಳು ಕಂಡೆ ಜಾನಕಿ ದೇವಿ ಬರುತಿರಲು | ಕಂಡು
ಸೀತಾಂಗನೆ ಭ್ರಮಿಸಿದವಳಾಮೃಗ |
ಕೊಂಡು ಬಾರೆ ರಾಮಾ ಹಸೆಗೇಳು...||
ಕಡೆದ ಕನಕ ಮಂಟಪದಿ ಪೊಡವೀಶನಿರಲು | ತಾನತಿ
ಸಂಭ್ರಮದಿ ಬಿಡಲವನ ಕರೆದು | ತೊಡೆಯ ಮೇಲೋಪ್ಪಿರಲು | ಬಿಡದೆ
ವಾದ್ಯಗಳು ಭೋರಿಡಲು | ಕಡುಗಲಿ ರಾಮಾ ಹಸೆಗೇಳು ....||
ಚಿನ್ನದ ಸರಪಳಿ ಸಣ್ಣ ಮುತ್ತಿನಾ ವಾಲೆ | ಚಿನ್ನದ ಸಲಿಗೆ ಚಿಂತಕ
ಪಂದ್ಯಗಳು | ಬಣ್ಣ ತರ ಬಾಪಲಿ ತಳ ತಳಿಸುತಿರೆ | ಚನ್ನರಾಯನ
ಪಟ್ಟದರಸಿ ಅರ್ಥಿಯಿಂದ ಹಸೆಗೆ ಕರೆತನ್ನಿ |
ತಂಟೆಣಿ ಸುವಗಣ ದೇವಂಗದುಡುಗೆಯನ್ನುಟ್ಟು | ಪಟ್ಟೆರತ್ನದ
ಚವರದ್ರ ಚವರಿಯ ತುರಾಯಿ ಕೋಟಿ ಪ್ರಭೆಯ| ಜರಿಪಗಳ
ಪುರೇಶನೆ ಕಿರೀಟವನ್ನಿಟ್ಟು ಹಸೆಗೇಳು...||
ಮುಡಿದಂಡೆಯಲಿ ಮುಡಿದಂತೆ ಬಾಡಿದುವು | ಹಸ್ತ ಲೋಚನ
ಪಾರ್ವತಿ ಬಳಲಿದಳು... ಹೊತ್ತಾಯಿತೆ ಶಿವಗರಳ ಪುರೇಶನೆ | ಚಿತ್ರದಿ
ಹಸೆಯಾ ಜಗಲಿಗೆ ಗಿರಿಸುತೆ ಪಾರ್ವತಿ ಮಡಲಕ್ಕಿ ಕೊಡುವೆನು...|
ತಲೆಯ ಮೇಲಿರುವ ಗಂಗೆ ಹಸನಾಗಿ ನೋಡಲು ಕಿರುಬೆವರು
ಕಿರುಗಳ ಪುರೇಶನೆ | ಶ್ರೀ ಹಾವಿಗೆಯ ಮೆಟ್ಟಿ ಹಸೆಗೇಳು...||
ಬಡ ನಡುವಿಗೆ ಡಕ್ಕ ಮಾಡಿದರ ಉಡಿಗಂಟೆ ಜಡೆಯಲಿ | ಲಾವಣ್ಯ
ಪೀತಾಂಬರ ಹೊಳೆವಂತ ಬಿಡುವಿನ ಬಾಲೆಯರು | ಮೃಗಳ ಪುರೇಶನೆ
ಭುಜ ಕೀರ್ತಿಯನ್ನಿಟ್ಟು ಹಸೆಗೇಳು...||

ಮುತ್ತಿನ ಮಣಿ ಮಂಟಪದಲಿ ಸ್ತ್ರೀಯರು ಐವರು||
ಸರಿಯಾಗಿ ಹಸೆಯಾ ಬರೆದಾರು...||
ಸರಿಯಾಗಿ ಹಸೆಯಾ ಬರೆದಾರು ಬಾಲೆಯರು|
ಸಿರಿದೇವಿ ಪತಿಯೇ ಹಸೆಗೇಳು...||
ಕಾಲುಂಗುರ ತಿರುಪಿಗೆ ಕಾಲಂದುಗೆ ಗಿನಿರವಧಿ
ಮೇಲೆ ದುಂಧುಬಿ ಧ್ವನಿಯಲಿ...||
ಮೇಲೆ ದುಂಧುಬಿ ಧ್ವನಿಯಲಿ ವನಜೆ
ವನಜೆ ಜಾನಕಿ ಹಸೆಗೇಳು...||
ಬಳಕಿ ಹೊಂಬಾಳೆ ಹೊಳೆಯುವ ಪದಕದ ಮೇಲೆ
ಮಲಕು ಮುತ್ತಿನ ಒಲಿಮಾಲೆ...||
ಮಲಕು ಮುತ್ತಿನ ಒಲಿಮಾಲೆ ಧರಿಸಿರುವ|
ನಾರಿ ಜಾನಕಿ ಹಸೆಗೇಳು....||
ಮುತ್ತಿನ ಮೂಗುತಿ ಮುಡಿದಂಡೆ ಹೂವು ಜಾಜಿ|
ಜಾಜಿ ಮಲ್ಲಿಗೆ ತುರುಬೀಗೆ...||
ಜಾಜಿ ಮಲ್ಲಿಗೆ ತುರುಬೀಗೆ ಸೀತಮ್ಮ |
ಪುತ್ಥಳಿ ಜಾನಕಿ ಹಸೆಗೇಳು...||

****

ಮುತ್ತಿನ ಹಸೆ ಚಾಪೆಯ ತಂದಾಸಿ
ನೇವಳ ಸರಪಣಿ ನೆಲದಲಿ ನಲಿದಾಡಿ
ಸತಿಪತಿ ಪಾಡಿ ರಂಗಸಾಲೆತ್ತಿ ಅತಿಕುಶಲರು ಬಂದು
ಹರಿಬ್ರಹ್ಮರು ಬಂದು ಹಾಸಿದರು ಶಿವನಾ ಹಸೆಚಾಪೆ||
ಚಿನ್ನದ ಹಸೆಚಾಪೆಯ ತಂದಾಸಿ
ನೇವಳ ಸರಪಣಿ ನೆಲದಲಿ ನಲಿದಾಡಿ
ರತಿಪತಿ ಪಾಡಿ ರಂಗಸಾಲೆತ್ತಿ ಅತಿ ಕುಶಲರು ಬಂದು
ಹರಿಬ್ರಹ್ಮರು ಹಾಸಿದರು ಶಿವನಾ ಹಸೆಚಾಪೆ||

****

# ಅಂಗಳದಲ್ಲಿ ಹಸೆ

ಕಟ್ಟಿಸಿದರಮನೆ ಕಟ್ಟು, ಭದ್ರದರಮನೆ| ಕಟ್ಟಿಸಿದಂಕಣಕೆ ಹೊಯಿಹೊನ್ನಾ ||
ಸಾರಿಸಿದರ ಮನೆ ಸಾರುಭದ್ರದರ ಮನೆ| ಸಾರಿಸಿದಂಕಣಕೆ ಹೊಯಿ ಹೊನ್ನಾ ||
ಹಸೆಬರೆವ ಕೋಣೆಯಲಿ ಏನುಂಟು-ಏನಿಲ್ಲಾ -ಹಣ್ಣಡಿಕೆ ಸಿಪ್ಪೆ
ಮೊದಲಿಲ್ಲಾ ||ಇಗೋ ಇಲ್ಲಿ ಇಂಬುಂಟು-ಹಸೆಯಾ ಬರೀರಣ್ಣಾ ||
ಯಾಲಕ್ಕಿ ಸಿಪ್ಪೆ ಮೊದಲಿಲ್ಲದ ಜಗುಲಲ್ಲಿ -ಇಗೋ ಇಲ್ಲಿ
ಇಂಬುಂಟು ಹಸೆಯಾ ಬರೀರಣ್ಣಾ |
ಕುಶಲದಿ ಭೂಮಧ್ಯೆ | ಹಸೆ ಹಸೆಗೂ ಮನೆಯಾ ಇರುಸಮ್ಮಾ |
ಸೂರ್ಯದೇವರ ಅಕ್ಕ ಬಂದಿದಾಳೆ| ಹಾಲಲ್ಲಿ ಹಸೆಯಾ ಬರೆದವರು...|
ಹಾಲಲಿ ಹಸೆಯಾ ಬರೆದವರು ಬಂದಿದಾರೆ| ಚಂದಾಗಿ ಬರೀರಮ್ಮ ಚೌಕಾಗಿ ||
ಚೌಕ ತುಂಬಮ್ಮಾ | ಅದ ತಿರುಗಿ ನೋಡಮ್ಮಾ |
ಅವಕೆ ಬಿಗಿಮುತ್ತು ಬಿಗಿಸಮ್ಮಾ ||
ಚಂದ್ರ ದೇವರ ತಂಗಿ ಬಂದಿದಾರೆ ಹಾಲಲ್ಲಿ ಹಸೆಯಾ ಬರೆದವರು
ಚಂದವಾಗಿ ಬರೀರಪ್ಪ ಚೌಕವಾ ||
ಒಕ್ಕಲಿಗರ ಹೆಣ್ಣು ಮಕ್ಕಳು ಹೊತ್ತಿನಾ-ಜೋರು ಕಾಣೆ |
ಹಾಲಲ್ಲೀ ಹಸೆಯಾ ಬರೆವರು ||
ಹಾರುವರ ಹೆಣ್ಣು ಮಕ್ಕಳು ಮೂರ್‍ಹೊತ್ತಿನ ಜೋರು ಕಾಣೆ
ಗಂಧದಲಿ ಹಸೆಯಾ ಬರೆವರು ||
ಅಕ್ಕಿ ಹಸೆ ಹೊಯ್ದು | ಅರಗಿಣೆ ಮಾತನಾಡಿ | ಉತ್ತಮ
ಕಾಳಿಂಗನ ಕಥೆ ಕೇಳಿ | ಉತ್ತಮ ಕಾಳಿಂಗನಾ ಕಥೆ ಕೇಳಿ
ಈ ಮನೆ ಇಂಬುಂಟು| ಹಸೆಯಾ ಬರೀರಣ್ಣಾ ...||
ಸಣ್ಣಕ್ಕಿ ಕೊಮ್ಮೆಗೆ ಒರಗಿ ನಿಂತವಳೆ ತಾರಮ್ಮಾ |
ಸಣ್ಣಕ್ಕಿ ತಾರಮ್ಮಾ ಹಸೆ ಹೊಯ್ಯುವಾ...||
ನಿನ್ನೆ ಬರೆದಾ ಹಸೆಯು ಚಂದವಿಲ್ಲಾ ಎಂದು ಬಂದಿದ್ದ
ಜಾಣೆಯರು ಜರೆವಾರು ತಾಯಮ್ಮಾ
ದೊಡ್ಡಕ್ಕಿ ತಾರಮ್ಮಾ ಹಸೆ ಹೊಯ್ಯುವಾ ....||
ಇಂದು ಬರೆದಾ ಹಸೆಯು ಚಂದವಿಲ್ಲವೆಂದು |
ಕೂತಿದ್ದ ಜಾಣೆಯರು ಜರೆವಾರು | ಕೂತಿದ್ದ ಜಾಣೆಯರು ಜರೆವಾರು |
ತಾಯಮ್ಮಾ ಸಣ್ಣಕ್ಕಿ ತಾರಮ್ಮಾ ಹಸೆ ಹೊಯ್ಯುವಾ...||

****

# ಗೋಡೆಯಲ್ಲಿ ಹಸೆ ಬರೆಯುವಾಗ

ಅಪ್ಪಾ-ಮಕ್ಕಳು ಕೂಡಿ ತುಪ್ಪಾ ಬೋನವನುಂಡು... |
ಉಕ್ಕಿನುಳಿಬಾಜು ಹೆಗಲೇರಿ ಹೊರಟಾರು ||
ಒಳ್ಳೊಳ್ಳೆ ಮರ ಕಡಿವಾ ಕೆಲ..ಸಕ್ಕೆ ||
ಅಣ್ಣಾ ತಮ್ಮಂದಿರು ಕೂಡಿ | ಹಾಲು ಬೋನವನುಂಡು |
ಚಿನ್ನಾದುಳಿಬಾಜು ಹೆಗಲೇರಿ ಹೊರಾಟಾರು |
ಒಳ್ಳೊಳ್ಳೆ ಮಣೆ ಕಡಿವಾ ಕೆಲ-ಸಕ್ಕೆ ||
ಆಲದ ಮಣೆಗ್ಹೇಳಿ| ಆರೇಳು ದಿನವಾದೊ-|
ಆಲದ ಮಣೆ ಯಾಕೆ ಬರಲಿಲ್ಲಾ ಬೆಡಗಿನ ಮಣೆಯು
ಊರಿಗೆ ಬಿಟ್ಟ್ಯ ಹೋರಿನ ಹೊಡ-ಕೊಡೀ-||

ಊರಿಗೆ ಬಿಟ್ಟ್ಯ ಹೋರಿನ ನಾವ್ಹೇಗೆ ಹೊಡಕೊಡಲೊ ? ಜಾಮದಲೆದ್ದು
ಕೆಲಸಕ್ಕೆ ಹೊರಟಾಗ| ಊರಿನ ತುಂಬಾ ಬೆಳಗಾದೊ ||

ಹಲಸಿನ ಮಣೆಗ್ಹೇಳಿ ಹತ್ತೆಂಟು ದಿನವಾದೋ ಹಲಸಿನ ಮಣೆಯಾಕೆ
ಬರಲಿಲ್ಲಾ ಬೆಡಗಿನ ಮಣೆಯು? ಊರಿಗೆ ಬಿಟ್ಟ್ಯ ಹಸುವಾ ಹೊಡಕೊಡೀ-||
ಊರಿಗೆ ಬಿಟ್ಟ್ಯ ಹಸುವ ನಾವ್ಹೇಗೆ ಹೊಡಕೊಡಲೋ ? ಜಾಮದಲೆದ್ದು
ಸೇವಂತಿಗೆ ಮುಡಿವಾಗ-ಬೆಳಗಾದೊ ||

ಗಂಧದ ಮಣೆಗ್ಹೇಳಿ ತಿಂಗಳು ದಿನವಾದೋ - ಗಂಧದ ಮಣೆಯಾಕೆ
ಬರಿಲಿಲ್ಲಾ ಬೆಡಗಿನ ಮಣೆಯು? ಊರಿಗೆ ಬಿಟ್ಟ್ಯೆಮ್ಮನ ಹೊಡ-ಕೊಡೀ ||

ಊರಿಗೆ ಬಿಟ್ಟ್ಯೆಮ್ಮನ ನಾವ್ಹೇಗೆ ಹೊಡಕೊಡಲೊ ? ಜಾಮದಲೆದ್ದು...
ಮಲ್ಲಿಗೆ ಮುಡಿದಾಗ ಬೆಳ-ಗಾದೊ ||
ಹಸೆ ಬರೆವ-ಜಗುಲಲ್ಲಿ |ಏನುಂಟು ಏನಿಲ್ಲಾ ಆ...
ಹಣ್ಣಡಿಕೆ ಸಿಪ್ಪೆ ಮೊದಲಿಲ್ಲಾ | ಹಣ್ಣಡಿಕೆ ಸಿಪ್ಪೆ ಮೊದಲಿಲ್ಲದ
ಕೋಣೆಯಲೀ -|ಹಸೆ ಬರೆವಾ ಕೋಣೆ ಬಲೂ -ಇಂಬು ||

ಹಸೆ ಬರೆವಾ ಜಗುಲಲ್ಲಿ ಏನುಂಟು ಏನಿಲ್ಲಾ -ಆ...
ಯಾಲಕ್ಕಿ ಸಿಪ್ಪೆ ಮೊದಲಿಲ್ಲಾ | ಯಾಲಕ್ಕಿ ಸಿಪ್ಪೆ ಮೊದಲಿಲ್ಲದ
ಜಗುಲಲ್ಲೀ |ಹಸೆ ಬರೆವಾ ಕೋಣೆ ಬಲೂ -ಇಂಬು ||

ಹಸೆಯಾ ಮೇಲೆರಡು ಕಳಸವಾ ತಂದಿಡಿರಿ | ಮಗಳಿಗು
ಮಹಾದೇವಂಗು |ಬಾಸಿಂಗದ ಬಣ್ಣಾ-ಬರೀರಣ್ಣಾ ||

ಹಸೆಯಾ ಮೇಲೆರಡು ಹಸೆಮಣೆ ತಂದಿಡಿರಿ | ಮಗಳಿಗು
ಮಹಾದೇವಂಗು |ಕುಂಡಲದಾ ಬಣ್ಣಾ ಬರೀರಣ್ಣಾ ||

ಹಸೆಯಾ ಬರಿಯಲಿಕೆ ಋಷಿಗಳು ನಾವು ಬಂದೇವು |
ಚಂದಾಗಿ ಬರೆಯಿರಿ ಚೌಕವಾ ||

ಹಸೆಯಾ ಬರೆಯಲಿಕೆ ಇನ್ನ್ಯಾರು ಬರಬೇಕು ? ತಾಯಿ
ಸೋದರದ ಹಿರಿಭಾವ| ತಾಯಿ ಸೋದರದ ಹಿರಿಭಾವ ಬರಬೇಕೆಂದು
ಚಂದಾಗಿ ಬರೆಯಿರಿ ಚೌಕವಾ ||

ಸೂರ್‍ಯದೇವರ ಅಕ್ಕ ಬರುತ್ತಾಳೆಂದು ಚಂದಾಗಿ ಬರೆಯಿರಿ ಚೌಕವಾ ||
ಚಂದ್ರ ದೇವರ ತಂಗಿ ಬರುತಾಳೆಂದು ಚಂದಾಗಿ ಬರೆಯಿರಿ -ಚೌಕಾಗಿ ||

ಆ ಬಣ್ಣಾ ... ಬರಿರಣ್ಣಾ | ಈ ಬಣ್ಣ... ಬರಿರಣ್ಣಾ
ಸೂರ್‍ಯದೇವರ ಬಣ್ಣಾ ...ಬರೀರಣ್ಣಾ ||
ಆ ಬಣ್ಣಾ ... ಬರಿರಣ್ಣಾ -ಈ ಬಣ್ಣಾ ... ಬರಿರಣ್ಣಾ
ಚಂದ್ರ ದೇವರ ಬಣ್ಣಾ ಬರೀರಣ್ಣಾ ||
ಆ ಬಣ್ಣ ಬರಿರಣ್ಣಾ -ಈ ಬಣ್ಣ ... ಬರಿರಣ್ಣಾ
ಗಿಳಿರಾಮರ ಬಣ್ಣಾ -ಬರೀರಣ್ಣಾ ||

ಮಾವನವರ ಮನೆಯಲಿ ಭಾವ ಮಕ್ಕಳು ಹೆಚ್ಚು |
ಹಸೆನೋಡಿ -ನಿಮ್ಮ -ಜರೆದಾರು|

ಹಸೆ ಬರೆದವರಿಗೆ ಏನೇನು ಉಂಬಳಿ ?
ಸಣ್ಣಕ್ಕಿ ಬಯಲು ಸಮಾ ಉಂಬಳಿ...||

ಹಸೆ ಬರೆದವರಿಗೆ ಏನೆಲ್ಲಾ ಉಡುಗೊರೆ ?
ಸಾಲು ಪಟ್ಟೆಗಳು ಸಮಾ-ಉಡುಗೊರೆ...||

ಹಸೆ ಬರೆದವರಿಗೆ ಯಾವ್ಯಾವ ವೀಳ್ಯಗಳು-?
ತಟ್ಟೇಲಿ ವೀಳ್ಯವ ಮಡಗೀರಿ ||

ಕುಂಡಲು-ವಿಭೂತಿ

****

# ಆರತಿ ಹಾಡುಗಳು

ಮಂಗಳಾರತಿ ಎತ್ತಿದರು ರಂಗೆಯರು | ರಂಗನಾಥನಿಗೆ
ಸಂಭ್ರಮದಿಂದಲಿ | ಮೂರು ಲೋಕವನು ಒಲಿದು ಪಾಲಿಸುವವಗೆ
ನೀಲಮೇಘ ಶ್ಯಾಮಗೆ | ಕರುಣಪಾಲ ಕಮಲ ನಾಭನಿಗೆ |
ಸುರಚಿರ ಗಂಭೀರ ಹರಿಗೆ | ರಂಗನಾಥನಿಗೆ |
ಮಂಗಳಾರತಿ ಎತ್ತಿದರು ನಾರಿಯರು||

****

ನೀರಜಭವೆಗೆ ಆರತಿಯ ಸೇರಿ ಬೆಳಗೀರೆ | ಕ್ಷೀರವಾರಿಧಿ
ಸುತೆಗೆ ಸಾರಸಾಕ್ಷಿಗೆ | ನಾರದಾದಿ ಮುನಿಗಳಿಗೆ | ಮಾರಜನಕನ
ರಾಣಿಗೆ ಉರಗವೇಣಿ | ಮಧುರವಾಣಿಗೆ ಅಂಗಜಾತೆ ಜನನಿಗೆ
ವರಭೃಂಗ ಕುಂತಳೆಗೆ | ನಿತ್ಯ ಮಂಗಳಾಂಗಿಗೆ | ಆರತಿಯ
ಸೇರಿ ಬೆಳಗಿದರು ನಾರಿಯರು ||

****

ಆಲದೆಲೆಯ ಮೇಲೆ ಲೋಲನಾಡುತ ಬಂದಾ |
ಲೋಲಕ್ಷನು | ಪತಿಯಾಗಬೇಕೆಂದು ಎತ್ತಿದ
ಳಾರತಿಯ ಶ್ರೀ ಶಿವನಿಗೆ | ಶ್ರೀ ಸತ್ಯಭಾಮೆಯು
ಬೆಳಗಿದಳಾರತಿಯಾ ||

ಮಾವ ಕಂಸನ ಕೊಂದಾ-ಶ್ರೀ ಕೃಷ್ಣ
ಪತಿಯಾಗಬೇಕೆಂದು ಎತ್ತಿದಳಾರತಿಯಾ |
ಶ್ರೀ ಶಿವನಿಗೆ ಬೆಳಗಿದಳಾರತಿಯಾ||
ಸುರರೆಲ್ಲಾ ಕೂಡಿ ಸಂಗೀತವ ಹಾಡಿ | ಸಂಗಳ ಶಿವನಿಗೆ
ಎತ್ತಿದರಾರತಿಯಾ ||

ಮುತ್ತೈದೆಯರೆಲ್ಲ ಸೇರಿ ಮುತ್ತಿನ ಆರತಿಯ
ಮುತ್ತಾಕ್ಷಿ ಶಿವನಿಗೆ ಪತಿಯಾಬೇಕೆಂದು
ಎತ್ತಿದರಾರತಿಯಾ ||

ಶ್ರೀ ತುಳಸಿ ಮಧ್ಯದೊಳಗಿರುವ ಕೃಷ್ಣನಾ ಬಳಸಿ
ನೋಡುವ ಬನ್ನಿರೇ|ಮಂಗಳಾರತಿ ತಂದು ಬೆಳಗಿರೆ|
ರಂಗನಾಥನ ಪ್ರಿಯೆಗೆ| ಸ್ವಾಮೀ ರಂಗನಾಥನ ಪ್ರಿಯೆಗೆ||

ಕಡಲಸುತ ಪಿಡಿದು ಬಲು ಬೆಡಗಿನಿಂದಲೆ ಬಂದಿರೆ|
ಸ್ವಾಮೀ ಬಲು ಬೆಡಗಿನಿಂದಲೆ ಬಂದಿರೆ|

ಬಿಲ್ಲ ಹಬ್ಬಕೆ ಅಲ್ಲಿ ಪೋಗಿ ಮಾವ ಕಂಸನಾ ಕೊಂದನಾ|
ಹಾಸು ಮಂಚವ ಲೇಸು ತಲೆದಿಂಬು| ಅಕ್ಕಿ ಹಾಸಿಗೆ ಹಾಸಲೇ||
||ಮಂಗಳಾರತಿ||

****

ಮಂಗಳಾರತಿ ಎತ್ತಿ ಬೆಳಗುವೆ| ರಂಗ ರುಕ್ಮಿಣಿ ದೇವಿಗೆ|
ಮಂಗಳಾಂಗಿಯರೊಡನೆ ಕೂಡಿ ಕ್ರಿಯೆಯಾಡಿದ ದೇವಗೆ|
ಮಡುವಿನೊಳು ಕಾಳಿಂಗನ ಹೆಡೆ ಪಿಡಿದು ಸೆಳೆದಾ ಸ್ವಾಮಿಗೆ|
ಒಡನೆ ಬೇಡಿದ ಅಕ್ಷಯ ಪಾತ್ರೆ|
ಸಲಹಿದ ಸ್ವಾಮಿಗೆ ಮಂಗಳಾರತಿ ಎತ್ತಿ ಬೆಳಗುವೆ||

ಬಾಯೊಳು ಬ್ರಹ್ಮಾಂಡ ಬೀರಿದ ಮಾಯಗಾರ ಕೃಷ್ಣಗೆ|
ರಾಮ ಪಾರ್ವತಿಗೆ| ದೇವತೆಯಾದ ದೇವತೆಯ ಪುತ್ರಗೆ||
ನಂದಗೋಕುಲದೊಳು ಬೃಂದಾವನದೊಳು| ಆಡುತ್ತಿರುವ ಕೃಷ್ಣಗೆ|
ಇಂದು ಬೇಡಿದ ವರಗಳನ್ನೆಲ್ಲಾ ಕೊಟ್ಟು ರಕ್ಷಿಪ
ದೇವಗೆ| ಎತ್ತಿ ಬೆಳಗಿರೆ ರಂಗ ರುಕ್ಮಿಣಿ ದೇವಿಗೆ||

****

ರಾಜಾಧಿರಾಜ ಪಾಂಡವರಿಗೆ| ತೇಜದಿ ಬೆಳಗುವ ಧರ್ಮದ
ರೂಪಗೆ| ಮೂಜಗದೊಳು ಕೃತಿಕ ಲೋಪಗೆ| ರಾಜವದನೆಯರು ||
ಐಗೋವದಿಂದಲಿ ರಚಿಸಿದ ರಾರತಿಯಾ ಬೆಳಗೀರೆ....||

ಐವರು ಸತಿಯವರು ತೋಳು ಮುತ್ತಿನ ಸ್ಯೆರವಗೆ|
ಮೈದೊಳೆದಿಟ್ಟು | ದೀವಿಗೆ ಬೆಳಕಿನಲಿ ಕುಶಲದಾರತಿಯಾ ಬೆಳಾಗಿರೆ...|

ಸೀರೆ ಸೀರೆಯ ಸೆಳೆದು|ಜಾಯ ಮುತ್ತಿನ ಸೇಸೆಯುತಳೆದು
ಕಾಲಂದಿಗೆ ಗೆಜ್ಜೆಯ ಗಲಿ ಗಲಿ| ಎಂದೆನಿಸುತಾ ಮೇಲಾಗ್ರದಲಿ
ಪಾಡುತ ಕಮಲದಾರತಿಯ ಬೆಳಾಗಿರೇ...||

ಮುತ್ತಿನಾರತಿ ತಂದೆತ್ತಿ ಪಾಡುವೆ।
ವಾರಿಜಾಕ್ಷಿ ವೀಣೆ ಹಿಡಿದ ಶಾರದೆಗೆ ॥

ಹಾರಪದಕವು ನೀರಾಜಿ ಸೀರೆಯು
ಚಂದ್ರ ಹಾರವು ಶ್ವೇತಾಂಬರಿಯು ॥

ಹಂಸರೂಢಳಾಗಿ ಬರುವ ವಾರಿಜಾಕ್ಷಿಗೆ
ಬ್ರಹ್ಮನ ರಾಣಿ ವೀಣೆ ಹಿಡಿದ ಶಾರದೆಗೆ॥

ಅಂಗೈಲಿ ಅರಗಿಣಿ ಹೊಳೆವ ಕಸ್ತೂರಿ ತಿಲಕ।
ಮುತ್ತಿನಾರತಿ ತಂದೆತ್ತಿ ಪಾಡುವೆ ವಾರಿಜಾಕ್ಷಿಗೆ॥

****

ಆರತಿಯೆತ್ತಿರೆ ನಾರಿಯರು ಐವರು
ಗೌಡರ ಮಗನಿಗು ಸೋಬನದ ಸತಿಗು
ಕುಶಲದಾರತಿಯ ಬೆಳಗಿರೆ ॥

ಹೆಗಲಲಿ ಶಾಲು । ಕೊರಳಲಿ ರಾಜಪದಕ।
ಸೊಂಟದಲಿ ಡಾಬುಪಟ್ಟಿ । ಕಾಲಲಿ ಗೆಜ್ಜೆಸರ ।
ಬಲಗಾಲಿಟ್ಟು ಒಳ ಬನ್ನಿರೆಂದು ಬೆಳಗಿರೆ ॥

ಕೇದಿಗೆ ರಾಗುಟಿ ಗೊಂಡೆಸರದ ಮದುಮಕ್ಕಳಿಗೆ
ಆಯುಳ್ಳದಾರತಿ ಬೆಳಗಿರೆ । ದೃಷ್ಟಿಗೆ
ತೆಂಗಿನ ಕಾಯಿ ಆರತಿಯ ತನ್ನಿರೆ ॥

****

ಕನ್ನೆಯವರು ಏಳು ಮಂದಿ ತಂದರು ಆರತಿ
ದೃಷ್ಟಿಗೆ ಬೊಟ್ಟಿಟ್ಟು ಅಕ್ಕಿ ಅರತಿಯ ಬೆಳಗಿದರು॥

ಮುತ್ತೈದೆಯರು ಒಂಬತ್ತು ಕೂಡಿ ಮುತ್ತಿನಾರತಿ ತಂದು
ದೃಷ್ಟಿಗೆ ಬೊಟ್ಟಿಟ್ಟು ಅರಶಿನದಾರತಿಯ ಬೆಳಗಿದರು॥

ಆರತಿ ತಂದ ಸತಿಯವರ ಆರತಿ ಬಟ್ಟಲಿಗೆ
ವೀಳ್ಯವ ನೀಡಿ  ಹರಸಿದರಾಗ ॥

ಹೆಗಲಲ್ಲಿ ಧೋತ್ರ ಹಣೆಯಲಿ ಗಂಧ ತಿಲಕ
ಮದು ಮಕ್ಕಳಿಗೆ ತೆಂಗಿನ ಕಾಯಾರತಿಯ ಬೆಳಗಿದರು॥

* * * *

## ಎಲೆ ಆರತಿ

ಮುತ್ತಿನ ಮಣಿ ಮಂಟಪ । ಮಧ್ಯದೊಳಗೆ
ರಾಮಸ್ವಾಮಿ ಜಾನಕಿ ಕುಳ್ಳಿರಲು । ಸತಿಪತಿಗು
ರಾಜವದನೆ ಸೀತೆಗು ಮುತ್ತಿನಾರತಿಯ ಬೆಳಗ್ಯಾರು॥

ಹವಳದ ಮಣಿ ಮಂಟಪ ಮಧ್ಯದೊಳಗೆ
ಕೃಷ್ಣ ರುಕ್ಮಿಣಿ ಕುಳ್ಳಿರಲು । ಸತಿ ಪತಿಗು
ಆಯುಳ್ಳ ಸೋಬನದ ಆರತಿ ಬೆಳಗ್ಯಾರು ॥

ಮುತ್ತಿನ ಹಸೆಚಾಪೆಯ ಮೇಲೆ ಸೋಬನದ
ಮದುಮಕ್ಕಳು ಕುಳ್ಳಿರಲು । ಸತಿಪತಿಗು
ಮುತ್ತಿನ ಆರತಿ ಬೆಳಗ್ಯಾರು ॥

****



# ಶೃಂಗೇರಿ ಮಠದ ಸಬ್ಬಮ್ಮ ದೇವಿಗೆ
# ಹರಿಕೆ ಹಣ ಕಟ್ಟುವಾಗ

ಐಗೂರು ಸೀಮೆಲಿ -ಹುಟ್ಟಿದಾ-ಮಹಾತಾಯಿ|
ಮಹಾಶಕ್ತಿ ದೇವಿ ತಾಯಿ ಸಬ್ಬಮ್ಮಾ - ತಾನೀಗ||

ಅಂಗಳ ಸಾರಿಸಿ-ರಂಗೋಲೆ ಬರೆಯಿ - ಸಿ
ಕೊಡಗಿನಾ -ಮದುವೆಯಾ-ಓಲೆಯಾ ಸುದ್ದಿ ಕೇಳಿ|

ಆಕಾಶಕೆ ಒಂದಾಗಿ-ಭೂಮಿಗೆ ಮುಂದಾಗಿ
ಚಪ್ಪರಾ-ಹಾಸ್ಯಾರು- ತಾಯಿ ಸಬ್ಬಮ್ಮಾ -ತಾನೀಗ||

ಜವಳಿಯಾ ಕೇರಿಗ್ಹೋಗಿ-ಜವಳಿಯಾ ತೆಗಸ್ಯಾರು-
ಚಿನ್ನಾದ ಕೇರಿಗ್ಹೋಗಿ-ಆಭರಣ ಮಾಡಿಸ್ಯಾರು||

ಮದುವೆಯಾ ಮಂಟಪಕೆ-ಕದಳಿಯಾ ಕಂಬಗಳಾ-
ಸಾಲು ಪಟ್ಟಿಗಳಾ ಬಿಗಿಸ್ಯಾರು- ತಾಯಿ ಸಬ್ಬಮ್ಮಾ -ತಾನೀಗ||

ಕಾಮನ ಗುಡ್ಡಕ್ಕೆ -ಬೆಂಕ್ಯಾದರೂ ಹಾಕ್ಸಿಯಾರು -|
ಭೀಮನ ಗುಡ್ಡಕ್ಕೆ-ನೀರನ್ನೆ ಬೆರಸ್ಯಾರು |

ಸೀಗೆ ಬಾಗೆ ತಕ್ಕೊಂಡು-ಬೆಳ್ಳಿಯ ಬಿಂದಿಗೆ|
ಕೈಯಲ್ಲಿ ಹಿಡಕೊಂಡು -ಜಲಕಕ್ಕೆ ಹೋದಾರು- ತಾಯಿ ಸಬ್ಬಮ್ಮಾ -ತಾನೀಗ||

ಕಾಗೆ ಮುಟ್ಟದ ನೀರು-ಜೋಗಿ ಸುಳಿಯದ ನೀರು
ಪಾತಾಳದ ಪನ್ನೀರು-ಹಸಿ-ನೀರು-ಹದಗೂಡಿ ||

ಜಲಕವ ಮಾಡಿದರು ಪಟ್ಟೇಯಾ-ನುಟ್ಯಾರು|
ಬಣ್ಣಕ್ಕೆ ಮೇಲಾದ ಒಡವೆಗಳಾ ತೊಟ್ಯಾರು | ತಾಯಿ ಸಬ್ಬಮ್ಮಾ -ತಾನೀಗ||

ಮರಿ ಕುದುರೆ ಏರಿದರು | ಜೀನಾವ ಹಿಡಿದರು |
ಇನ್ನೊಂದು ಕೈಯಲ್ಲಿ ಪನ್ನಕೊಡೆ ಹಿಡುದು |

ಸಣ್ಣಕ್ಕಿ ಬಯಲಾಗೆ ನಡೆದಾರು-ಅತ್ತೊಮ್ಮೆ ನೋಡ್ಯಾರು |
ಇತ್ತೊಮ್ಮೆ ನೋಡ್ಯಾರು-ಆ -ಬಯಲು ನನ್ನದಲ್ಲಾ ||

ಈ ಬಯಲು ನನ್ನದಲ್ಲಾ | ನಡುಲಿರುವ ಬಯಲು|
ನನ್ನದೆಂದು ಕೊಂಡು| ಕದಳಿಯ ಬನಕಾಗಿ ನಡೆದಾರು||

ತಾಯಿ ಸಬ್ಬಮ್ಮಾ -ತಾನೀಗ||

ಆ ತೋಟ ನನ್ನದಲ್ಲಾ -ಈ ತೋಟ ನನ್ನದಲ್ಲಾ -ಬೆಟ್ಟದಾ
ಸಾಲಲಿರುವ| ಯಾಲಕ್ಕಿ ತೋಟವೆ ನನದೆಂದು ಕೊಂಡಾಳು ||

ಆ ಮನೆ ನನ್ನದಲ್ಲಾ-ಈ ಮನೆ ನನ್ನದಲ್ಲಾ-
ನಡುಮನೆಯ ನಂದಾ ದೀವಿಗೆಯ ಅರಮನೆ|

ನನ್ನದೆಂದು ಕೊಂಡ ಸಬ್ಬಮ್ಮಾ -ಬೆಳ್ಳಿಯ ಗೊಟ್ಟಗಳ
ಕೈಯಲ್ಲಿ ಹಿಡಿದಾರು-ಒಂದು ವರಹ ಚಿನ್ನಾವ

ಗೊಟ್ಟದೊಳಗೆ ಹಾಕಿದರು-ಎಡಕೈಯ ಗೊಟ್ಟಕ್ಕೆ
ಒಳ್ಳೆಮೆಣಸು ಹಾಕಿದರು | ತಾಯಿ ಸಬ್ಬಮ್ಮಾ ತಾನೀಗ-||

ಮೇಲುಪ್ಪರಿಗೆಗೆ ಏರಿಸಿ ಧೂಪಾರತಿಯಾ ಮಾಡಿದರು ||
ಐಗೂರು ಸೀಮೆಲಿ ಹುಟ್ಟಿದಾ ಮಹಾತಾಯಿಗೆ
ಮಹಾಶಕ್ತಿ ದೇವಿ ಸಬ್ಬಮ್ಮಾ ತಾಯಿಗೆ-
ನಮೋ ನಮೋ ನಮೋಸ್ತು ತೇ: ನಮೋಸ್ತು ತೆ: ನಮೋಸ್ತು ತೆ :

****

**ಕೊ**ಡಗು ಮಲೆಯಾ-ಅಣ್ಣಂದಿರಿಗೆ|
ಮದುವೆ ಎಂಬಾ -ಸುದ್ದಿ ಕೇಳಿ|
ಹೊರಟಾಳು ತಾಯಿ-ಸಬ್ಬಮ್ಮಾ-ತಾನೀಗಾ...||

ಗೌಡವರೇ, -ಗೌಡವರೇ,-ಇತ್ತ ಕೇಳಿ
ನೀವು-ಬಚ್ಚಲ ಒಲೆಯಲ್ಲಿ ಬೆಂಕಿಯ ಉರಿಸಿ|
ಬಿಸಿ ನೀರು ಸ್ನಾನಕ್ಕೆ - ತಾಯಿ-ಸಬ್ಬಮ್ಮಾ-ತಾನೀಗಾ...||

ಬಿಸಿನೀರು ಸ್ನಾನಕ್ಕೆ ಹೊರಟಾಳು-ಸಬ್ಬಮ್ಮ |
ಬಿಳಿಯಾ ಬಟ್ಟೆಯಾ | ಬಟ್ಟೆಯ ಕಳಚಿದಳು ಎಣ್ಣೆ ಅರಶಿಣ
ಸ್ನಾನವ -ಮಾಡಿದಳು-| ತಾಯಿ -ಸಬ್ಬಮ್ಮಾ ತಾನೀಗಾ...||

ಜಳಕವ ಮಾಡಿ | ಪಟ್ಟೆಯ ನುಟ್ಟಾಳು-
ಗೌಡವರೆ-ಗೌಡವರೆ-ಎಂದು ಕರೆದಾಳು|
ತಾಯಿ ಸುಬ್ಬಮ್ಮಾ-ತಾನೀಗಾ...||

ನೂರೊಂದು ಅನ್ನದಡಿಗೆ ಮಾಡಿಸಿ ಎಂದಾಳು |
ನೂರೊಂದು ಅಡಿಗೆಯಾ-ಮಾಡಿದರು ಗೌಡವರು|
ಊಟವ ಮುಗಿಸಿ ಹೊರಟಾಳು ತಾಯಿ ಸಬ್ಬಮ್ಮಾ -ತಾನೀಗಾ...||

ಹಿಂದೆ ನೂರಾಳು-ಮುಂದೆ ನೂರಾಳು ಇನ್ನೂರು
ಆಳುಗಳ ಕೂಡಿ-ಎಡಕೈಲಿ ಗೆಜ್ಜೆ ಕತ್ತಿ ಬಲದ ಕೈಲಿ ಪನ್ಯಕೊಡೆ|
ಹಿಡಕೊಂಡು ಹೊರಟಾಳು| ತಾಯಿ ಸಬ್ಬಮ್ಮಾ-ತಾನೀಗಾ...||

ಆ ಘಟ್ಟ ನನ್ನದಲ್ಲಾ | ಈ ಘಟ್ಟಾ ನನ್ನದಲ್ಲಾ |
ನಡುವಿನ ಘಟ್ಟಾ ನನ್ನದೆಂದುಕೊಂಡು | ಮಹಾಶಕ್ತಿ ತಾಯಿ
ಮಹಾತಾಯಿ ಸಬ್ಬಮ್ಮ | ಹೊರಟಾಳು ತಾನೀಗ...||

ಆ ತೋಟಾ-ನನ್ನದಲ್ಲ ಈ ತೋಟಾ-ನನ್ನದಲ್ಲಾ
ತುಂಬಿರುವ ಹಿಂಗಾರ ತೋಟಾ-ನನ್ನದೆಂದು
ಕೊಂಡು ನಡೆದಾಳು ತಾಯಿ ಸಬ್ಬಮ್ಮಾ-ತಾನೀಗಾ...||

ಆ ಮನೆ ನನ್ನದಲ್ಲಾ ಈ ಮನೆ ನನ್ನದಲ್ಲಾ
ನಡುಲಿರುವ ಮನೆಯು ನನ್ನದೆಂದು ಹತ್ತಿದಳು| ತಾಯಿ-ಸಬ್ಬಮ್ಮಾ-ತಾನೀಗಾ...|

ಬೆಳ್ಳಿಯ ಗಿಂಡಿ ಬೆಳಗಿದರು-ಒಳಗಿಂದಾ-
ಪಾತಾಳದ ಪನ್ನೀರು ತಂದಾರು|-ನೆಲ್ಲಕ್ಕಿ ನಡುಬಾಡೆ
ಎದುರಲ್ಲಿ ನಿಂತಾಳು- ತಾಯಿ ಸಬ್ಬಮ್ಮಾ ತಾನೀಗಾ...||

ನಂದಾದೀವಿಗೆಗೆ ಎದುರಾಗಿ ನಿಂತಾಳು ಬೆಳ್ಳಿ
ಗೊಟ್ಟ ಹಿಡಿದೂ-ಎಡಕೈಲಿ ಬೆಳ್ಳಿಗೊಟ್ಟ | ಬಲಕೈಲಿ
ಗಜಗೋಲು ಹಿಡಿದಾಳು ತಾಯಿ-ಸಬ್ಬಮ್ಮಾ ತಾನೀಗಾ...||

ಚಿನ್ನಾದ ನಾಣ್ಯವ ಬೆಳ್ಳಿಯ ಗಜಕೋಲಲಿ ಜಡಿ
ಜಡಿದು ತುಂಬಿ-ಗಂಧ ಧೂಪದ ಹೊಗೆಯನ್ನೆ ಕೊಡಿಸಿ
ಮೇಲುಪ್ಪರಿಗೆಗೆ ಏರಿಸಿದರು| ತಾಯಿ ಸಬ್ಬಮ್ಮಾ ತಾನೀಗಾ...|
ತಂದಾನೊ ತಾನಿತಾನನೋ...

ತಂದಾನೋ-ತಾನೀ-ತಾನೀಗಾ-

ತಾಯಿ ಸಬ್ಬಮ್ಮಾ ತಾನೀಗಾ...||

****

ಹುಟ್ಟಿ ಬೆಳೆದಾ ಮನೆಯಲ್ಲಿ । ನಾಲ್ಕನೆ ಗೋತ್ರದ ಅಣ್ಣಂದಿರ
ಮನೆಯಲ್ಲಿ।ಮದುವೆಯ ಲಗ್ನವೆಂದು ಓಲೆ ಬಂದಾವು ॥
ಅಕ್ಕಾ ಸಬ್ಬಮ್ಮ-ಓಲೆಯ ಓದಿ ನೋಡಿದಳು॥

ಚಿನ್ನಾದ ಕೈಕೊಡಲಿ ತೆಗೆದಾಳು ಸಬ್ಬಮ್ಮ।ಏಳು
ಹೊನ್ನಿನ ಮರವನ್ನು ಕಡಿಸ್ಯಾಳು।ಚಿನ್ನಾನೆ
ಚೆಲುವೆಂಬಾ-ಬಡಗೀಯ ಕರೆಸ್ಯಾಳು। ಅಕ್ಕ ಸಬ್ಬಮ್ಮಾ...॥

ತೂಗುವ ಉಯ್ಯಾಲೆ ಮಾಡಿಸ್ಯಾಳು। ಚಿನ್ನಾದ ಎಣ್ಣೆ ಚರುಕು
ಬಣ್ಣದ ಬಾಚಣಿಗೆ ಮಾರುದ್ದ ಮಾರು ಕೂದಲು
ಬಗುತಲೆ ತೆಗೆದಾಳು। ಅಕ್ಕ ಸಬ್ಬಮ್ಮಾ...॥

ಮಾರುದ್ದ ಜಡೆಯನ್ನು ಹೆಣೆದಾಳು।ಹಣೆಗೆ
ಕುಂಕುಮ ಧರಿಸಿ। ಕಣ್ಣಿಗೆ ನಯವಾದ ಕಣ್ಣು ಕಪ್ಪು
ತೀಡಿದಳು- ಅಕ್ಕ ಸಬ್ಬಮ್ಮಾ॥

ಮೇಲುಪ್ಪರಿಗೆಗೆ ನಡೆದಾಳು। ಪಟ್ಟೆ ಸೀರೆಯ
ನುಟ್ಯಾಳು।ಬೇಕಾದ ಒಡವೆಗಳಾ ಧರಿಸಿದಳು ಅಕ್ಕ-ಸಬ್ಬಮ್ಮಾ....॥

ಕೊಡಗು ಮಲೆಯ ಅಣ್ಣಂದಿರ ಲಗ್ನಕ್ಕೆ।
ಹೊರಟಾಳು। ನಾಲ್ಕನೆ ಗೋತ್ರದಾ-ಅಣ್ಣಂದಿರ
ಲಗ್ನಕ್ಕೆ - ಅಕ್ಕ ಸಬ್ಬಮ್ಮಾ...॥

ಬಲಕೈಲಿ ಗೆಜ್ಜೆ ಕತ್ತಿ।ಎಡಕೈಲ ಪನ್ನಕೊಡೆ
ಜೋಕೀನ ಮೆಟ್ಟಲು ಮೆಟ್ಟಿದಳು-ನಾಲ್ಕನೆ
ಗೋತ್ರದ ಅಣ್ಣಂದಿರಾ-ಲಗ್ನಕ್ಕೆ ಅಕ್ಕ ಸಬ್ಬಮ್ಮಾ...॥

ಆಗದ್ದೆ ನನ್ನದಲ್ಲ ।ಈ ಗದ್ದೆ ನನ್ನದಲ್ಲಾ
ಅಡಿಕೆ ಹಿಂಗಾರ ತುಂಬಿರುವ ತೋಟವೆ
ನನ್ನದೆಂದು ನಡೆದಾಳು- ಅಕ್ಕ ಸಬ್ಬಮ್ಮಾ...॥

ಮೂಡಂದ -ಬಂದೀತು -ಮೆಣಸಿನಾ-ಬೇರೊಂದು
ಐದೇನೆ ಒಳ್ಳೆಮೆಣಸು। ಎರಡು ಬೆಳ್ಳೀ-ಪಾವಲಿ।
ಐದು ಮಾವಿನೆಲೆ ಹಿಡಿದು ನಿಂತಾಳು-। ಅಕ್ಕ ಸಬ್ಬಮ್ಮಾ...॥

ಚಿನ್ನದ ಗೊಟ್ಟಕ್ಕೆ ಬೆಳ್ಳಿಯ ಗಜಕೋಲಲಿ।
ಜಡಿ ಜಡಿದು ತುಂಬಿದಳು।ಗಂಧ ಧೂಪದ
ಹೊಗೆಯನ್ನೆ ಕೊಡುಸ್ಯಾಳು। ಅಕ್ಕ ಸಬ್ಬಮ್ಮಾ...॥

ಮೇಲುಪ್ಪರಿಗೆಯಾ।ಚಿನ್ನದ ಮುಡುಪುಗೆ
ಏರಿಸಿದರು ಅಕ್ಕಾ ಸಬ್ಬಮ್ಮಾ। ಅಕ್ಕ ಸಬ್ಬಮ್ಮಾ...॥

# ಹಾಲು ತುಪ್ಪ ಕುಡಿಸುವಾಗ

ಗುರು ಗಣಪತಿಗಾಗಿ ನಮಿಸಿ ಶಾರದೆಯಾ | ಕರುಣಜನಾಭನ
ಮದುವೆ ಗೊತ್ತಾಗಿ ಹರುಷದಿ | ಸತಿಯುವರು ಸಮೇತದಲಿ
ಕೌಸಲ್ಯೆ ಸುತೆಯುವರು ವರವಾ-ರಚಿಸಿದರು ||
ಕ್ಷೀರ ಸಮುದ್ರದೊಳಗಿರುವ ಬಾಲೆಯುರು | ಧಾರುಣಿಯೊಳಗಣ
ಅತಿ ಚೆಲುವೆಯರು | ರಾಯರಿಗೂ-ಮಹಾಲಕ್ಷ್ಮಿಗೂ |
ಹಸ್ತದಿ ಹಾಲು ತುಪ್ಪಾ-ಎರೆದಾರು ||
ಮುತ್ತಿನ ದಸ್ಸೆಯರ ರಚಿಸಿದರಂದು | ನಿಸ್ತ್ರೆಯವರೆಲ್ಲರು ಸೇರಿ
ಎದ್ದು ಬಂದು | ಸತ್ಯಲೋಕದ ಸ್ತ್ರೀಯರು ಬರಲಾಗ |
ಅಚ್ಯುತ ಸ್ವಾಮಿಗೂ-ನಿಸ್ತ್ರೆ-ಮಹಾಲಕ್ಷ್ಮಿಗೂ ಹಸ್ತದಿ |
ಹಾಲು ತುಪ್ಪಾ-ಎರೆದಾರು ||
ಮಡದಿಯರೆಲ್ಲರೂ ಸೇರಿ ಸಡಗರದಿಂದಲಿ | ಕಡಗವನ್ನಿಟ್ಟಿದ್ದ
ಕೈಗಳ ಚಂದದಿ ಒಡನವು ಬಳಕುತ | ಬಿಡಿಸಿದರಂದು ಉಡುಪಿ
ಶ್ರೀ ಕೃಷ್ಣಗು-ಮಡದಿ ಮಹಾಲಕ್ಷ್ಮಿಗೂ
ಹಾಲುತುಪ್ಪಾ-ಎರೆದಾರು ||
ಮುತ್ತಿನ ಉರುಳಿಯ ತಂದಿರಿಸಿ | ನವರತ್ನದ ಸೇವಂಟುಗಳಾ
ಹಿಡಿ ಎನ್ನುತ್ತಾ -ತೊಡಿಗೆಯ ತಿನ್ನುತಾ-ಪ್ರಾಜ್ವಲವು ಸರಸನ್ನ
ಬಾಲೆಯರು ಮೂರುತಿ-ರಾಮಂಗೂ-ಸೀತೆಗೂ |
ಹಾಲುತುಪ್ಪಾ-ಎರೆದಾರು ||
ಚಿನ್ನದ ಮಣೆಗಳ ತಂದಿರುಸಿ | ನಿಸ್ತ್ರೀವರು ಮಗನಾ
ಕುಳ್ಳಿರಿಸಿ | ಮುತ್ತಿನ ಜನ್ನೆಯರ ರಚಿಸಿದಾಗ |
ಕನ್ಯೆ ಮಹಾಲಕ್ಷ್ಮಿಗೂ ನಾರಾಯಣ ಕೃಷ್ಣಗೂ ಪ್ರೇಮದಿಂದಲಿ
ಹಾಲು ತುಪ್ಪಾ-ಎರೆದಾರು ||

ನಿಸ್ತ್ರೆ=ಮುತ್ತೈದೆ

****

ಹಾಲಾ-ಕೊ-ಡಮ್ಮಾ|ಬಾಲಾ-ಕೃಷ್ಣಗೆ ಬೇಗಾ|ತಂದು
ಕೊ- ಡಮ್ಮಾ ಮುದ್ದು ರಂಗಗೆ ಬೇಗಾ|ಹಾಲಾ ಕುಡಿದನೆ ರಂಗಾ|
ಹೇಳ-ಬಾರದೆ ಗೋಪೀ-||
ಮೂರಡಿ ಭೂಮಿಯ ಬೇಡಿ ನಿಂದನೆ ಕೃಷ್ಣಾ-|
ಹಾಲಾ ಕೊ-ಡಮ್ಮಾ ಮುದ್ದು ರಂಗಗೆ ಬೇಗಾ-|
ಐದಡಿ ಭೂಮಿಯ ಬೇಡಿ-ನಿಂದನೆ ಕೃಷ್ಣಾ-|
ಹಾಲಾಕೊ-ಡಮ್ಮ| ಮುದ್ದು ರಂಗಗೆ ಬೇಗಾ -|
ತಂದು ಕೊ-ಡಮ್ಮ ಮುದ್ದು ರಂಗಗೆ ಬೇಗಾ-||

****

# ಸೇಸೆ ಅಕ್ಕಿ

ಚೆಲ್ಲಿ ಏರೆ ಮಲ್ಲಿಗೆಯಾ ನೀವೇಲ್ಲರು ಸೇರಿ | ಚೆಲ್ಲಿ ಏರೆ ಮಲ್ಲಿಗೆಯ
ಮದು ಮಕ್ಕಳ-ತುಂಬಾ ಚೆಲ್ಲಿ ಏರೆ ಮಲ್ಲಿಗೆಯಾ||
ವಲ್ಲಾಕ್ಷಿಯರೆಲ್ಲರು ಸೇರಿ| ಉಲ್ಲಾಸನ ಮೇಲೆ ಚೆಲ್ಲಿ ಏರೆ ಮಲ್ಲಿಗೆಯ
ಕಡಗ ಕಂಕಣದಿಂದ ಬಂದಾ-| ಉಡುಪಿ ಕೃಷ್ಣನಾ-ಮೇಲೆ ಚೆಲ್ಲಿ ಏರೆ ಮಲ್ಲಿಗೆಯಾ||
ಗಂಧ ಪರಿಮಳದಿಂದ ತುಂಬಿದ| ಸುಂದರ ಬಾಲಯ್ಯನ
ಮೇಲೆ ಚೆಲ್ಲಿ ಏರೆ ಮಲ್ಲಿಗೆಯಾ| ನೀವೇಲ್ಲರು ಸೇರಿ ಚೆಲ್ಲಿ ಏರೆ ಮಲ್ಲಿಗೆಯಾ||

****

ಮುತ್ತು ಬಿದ್ದ -ವೆಂದು ಬೆದರದಿರಿ-ಅಣ್ಣಯ್ಯಾ
ಮುತ್ತಲ್ಲ ಕಾಣೊ-ಹಸೆಯಕ್ಕೀ-||ಸೋಬಾನವೇ||
ಮುತ್ತಲ್ಲ ಕಾಣೊ-ಹಸೆಯಕ್ಕಿ-ತೆನೆಯಕ್ಕಿ-|
ಮುತ್ತಿನ ಸಾಲಲಿ ಬೆಳೆ-ದಕ್ಕೀ-||ಸೋಬಾನವೇ||
ದೇಶ-ಆಳುವವನ ತಲೆ ತುಂಬಾ-|ಎತ್ತೀ-ಚೆಲ್ಲಿ ಏರೆ-||ಸೋಬಾನವೇ||
ಹವಳ-ಬಿದ್ದಾ-ವೆಂದು ಬೆದರದಿರಿ ಅಣ್ಣಯ್ಯಾ|
ಹವಳಲ್ಲಾ-ಕಾಣೋ-ತೆನೆಯಕ್ಕೀ
ಹವಳದ ಸಾಲಲ್ಲಿ ಬೆಳೆದಕ್ಕಿ ತೆನೆಯಕ್ಕಿ...||
ಸೋಬಾನವೇ||ಸೋಬಾನವೇ||

ಬಟ್ಟಾಲು ತೊಳೆದಿರುಸಿ|ಶ್ರೀ ಹರಿಯಾ-ನೆನೆದವಳೇ-
ಸಣ್ಣಾ ಮುತ್ತೀನಾ ಕೊರಳವಳೇ-ಎಸಳೂ-ಬಾಸಿಂಗವೇ-
ಈ ಮನೆ ಕುಶಲರಿಗೆ ಸೋಬಾನವೋ...||
ಹರಿವಾಣ ಬೆಳಗಿರಿಸಿ ಪಟ್ಟೇಯ ನೆರಿಯವಳೇ-
ಸಣ್ಣಾ ಮುತ್ತಿನ ಸರದ ಕೊರಳವಳೇ|ಎಸಳೂ ಬಾಸಿಂಗವೆ..||
ಬಿಳಿಕಬ್ಬು ಕಡಿದೂ-ಬೀದ್ಯೆಲ್ಲಾ ಓಡಾಡಿ-ಬಿಳಿ ಎಮ್ಮೆ ಕರೆದಾ
ನೊರೆಹಾಲು|ಬಿಳಿ ಎಮ್ಮೆ ಕರೆದಾ ನೊರೆಹಾಲು ಸಕ್ಕರೆ-
ಕದಳಿ-ಬಾಳೆ ಹಣ್ಣು |ತಂದು ಗಂಗಳಕೆ-ಹದಗೂಡಿ|ಎಸಳೂ -ಬಾಸಿಂಗವೇ-
ಈ ಮನೆ ಕುಶಲರಿಗೆ ಸೋಬಾನವೆ-||
ಕರಿಕಬ್ಬು ಕಡಿದು ಕಾಡೆಲ್ಲಾ ಓಡಾಡಿ| ಕರಿ ಎಮ್ಮೆ ಕರೆದಾ-
ನೊರೆಹಾಲು| ಎಸಳೂ ಬಾಸಿಂಗವೇ ಈ ಮನೆ ಕುಶಲರಿಗೆ ಸೋಬಾನವೆ-||

****

ಒಂದು ಕಟ್ಟು ಸುಳಿಎಲೆ-| ಒಂದು ಕಟ್ಟು ಬಿಳಿ ಎಲೆ-|
ಒಂದಡಿಕೆ ಕೊಂಡಾ-ಹರಿವಾಣ|| ಬಾರದೆ ಹರದೇವರು ಕಂಚು ಬೆಳಗ್ಯಾರು
ಎರಡು ಕಟ್ಟು ಸುಳಿ ಎಲೆ| ಎರಡು ಕಟ್ಟು ಬಿಳಿಎಲೆ|
ಎರಡಡಿಕೆ ಕೊಂಡಾ ಹರಿವಾಣ ಬಾರದೆ| ಹರದೇವರು-ಕಂಚು ಬೆಳಗ್ಯಾರು||
ಎಸಳೂ -ಬಾಸಿಂಗವೇ-|ಈ ಮನೆ ಕುಶಲರಿಗೆ ಸೊಬಾನವೆ-||
3 ಕಟ್ಟು, 4 ಕಟ್ಟು, 5 ಕಟ್ಟು .......

****

ಬಟ್ಟಾಲು ತೊಳೆದಿರುಸಿ| ಪಟ್ಟೇಯ ನೆರಿಯವಳೆ|
ಪಟ್ಟಿ ಮುತ್ತು ಸರದಾ-ಕೊರಳವಳೇ||ತಾರಮ್ಮಾ-
ಬಟ್ಟಾಲು ತೊಳೆದು-ಎಡೆಮಾಡಿ||

ಕಾಳಿಯ ಕರೆದ್ಹಾಲು| ಕೆಂದೇಯಾ ಕರೆದ್ಹಾಲು|
ಕೆಂದೇಯ ಕರೆದಾ ನೊರೆಹಾಲು|| ಸಕ್ಕರೆ
ದೇವರಿಗೆ ಅರ್ಪಿಸಿದ ನವಧಾನ್ಯಾ-||

ಅಕ್ಕರ ದಿನದಲ್ಲು -ಶುಕ್ರ ಮುತ್ತೀನಾರತಿಯಾ
ಅಕ್ಕರ ದಾರತಿಯಾ ಬೆಳಾಗಿರೆ|
ಸಕ್ರಮ ದಿನದಲ್ಲು ಶುಕ್ರ ಮುತ್ತಿನಾರತಿಯಾ
ಶ್ರೀ ಮಂದಾರತಿಯಾ ಬೆಳಾಗೀರೆ|

ಮೂರೆಲೆಯ ಎಲೆತಂದು| ಬಗ್ಗಿಸಿ ದೊನ್ನೆಯ ಕಟ್ಟಿ |
ನುಗ್ಗಮ್ಮ ನಂತೆ-ಮಡದಿಯರು || ಕನ್ಯೆಗೆ
ಹಾಲು ತುಪ್ಪಾ-ಎಡೆಮಾಡಿ||

ಬಾಳೆಯ ಎಲೆ ತಂದು| ಬಗ್ಗಿಸಿ ದೊನ್ನೆಯ ಕಟ್ಟಿ
ನುಗ್ಗಮ್ಮ ನಂತೆ -ಮಡದಿಯರು |ಕನ್ಯೆಗೆ
ಹಾಲು ತುಪ್ಪಾ-ಎಡೆಮಾಡಿ||

****

ಬಟ್ಟಾಲು ತೊಳೆದಿರುಸಿ |ಪಟ್ಟೇಯ ನೆರಿಯವಳೆ|
ಮುತ್ತೀನ ಸರದಾ-ಕೊರಳವಳೇ ||
ತಾರಮ್ಮ ಬಟ್ಟಾಲು ತೊಳೆದು -ಎಡೆಮಾಡಿ||
ಬಟ್ಟಾಲು ತೊಳೆದು ಎಡೆಮಾಡಿ ತಿರುಗುವಾಗ ಝುಗ್ಗೆಂಬಾ|
ಕಾಲುಗೆಜ್ಜೆ-ಝುಲಕೆಂಬಾ ಕೊರಳಮುತ್ತು...||
ಏನಮ್ಮಾ-ಎಲೆ ಗೌರಿ ಏನಡಿಗೆ ಮಾಡುತ್ತಿದ್ದೆ?
ನಾನಡಿಗೆ ಮಾಡಲಿಲ್ಲಾ-ಶರಣವರ ಶಿವಪೂಜೆ ಮಾಡುತಿದ್ದೆ-|
ಸೂರ್ಯ ಬನಕೋಗಿ ಸೂರ್ಯ-ಬಾಳೆಲೆ ತಂದು-ಜೋಡಿಸಿ |
ದೊನ್ನೆಯ ಕಟ್ಟಿ-ಸೂರ್ಯಮ್ಮ ನಂತೆ ಮಡದಿಯರು|
ಘುಮ್ಮಾ-ಘುಲರೆನ್ನಿರೆ| ಎಲೆ ಮಡದಿ ಸುಮ್ಮನೆ ಎಡೆಮಾಡಿರೇ-|
ಚಂದ್ರ -ಬನಕೋಗಿ-ಚಂದ್ರ-ಬಾಳೆಲೆ ತಂದು|ಜೋಡಿಸಿ ದೊನ್ನೆಯ ಕಟ್ಟಿ
ಚಂದ್ರಮ್ಮ ನಂತೆ ಮಡದಿಯರು-ಘುಮ್ಮಾ-ಘುಲರೆನ್ನಿರೇ-
ಸುಮ್ಮನೆ ಎಡೆಮಾಡಿರೇ-ಎಡೆಮಾಡಿ ತಿರುಗುವಾಗ ಝುಗ್ಗೆಂಬಾ-
ಕಾಲುಗೆಜ್ಜೆ-ಝುಲಕೆಂಬಾ-ಕೊರಳಮುತ್ತು-||

ಏನಮ್ಮಾ ಎಲೆಗೌರಿ ಏನಡಿಗೆ ಮಾಡುತಿದ್ದೆ?

ನಾನಡಿಗೆ ಮಾಡಲಿಲ್ಲಾ-ಶರಣವರ ಶಿವಪೂಜೆ ಮಾಡುತ್ತಿದ್ದೆ |
ಒಂದು ಗಂಗಳಕೆ ಒಂದು ಭವನಕ್ಕಿ-ಎರಡಚ್ಚು ಬೆಲ್ಲಾ |
ಒಡೆದಿಕ್ಕಿ-ಘುಮ್ಮಾ ಘುಲರೆನ್ನಿರೇ||
ಆನೆಯಿಂದಿಳಿರಣ್ಣಾ | ದಾಯಾಟ ಬಿಡಿರಣ್ಣಾ |
ಬಾಯಾ ತಾಂಬೂಲ ಉಗಿರಣ್ಣಾ-ಬಾಯಿ ತಾಂಬೂಲ ಉಗಿರಣ್ಣಾ-
ಬಿಡಿರಣ್ಣಾ | ಅಕ್ಕಯ್ಯ ತರುತಾಳೆ-ಬಾಯಾರಿಕೆ| ಘುಮ್ಮಾ ಘುಲರೆನ್ನಿರೇ-||
ಕುದುರೆಯಿಂದಿಳಿರಣ್ಣಾ-ಪಗಡೆಯಾಟ-ಬಿಡಿರಣ್ಣಾ | ಬಾಯಾ
ತಾಂಬೂಲ ಉಗಿರಣ್ಣಾ | ಬಾಯಿ ತಾಂಬೂಲ ಉಗಿರಣ್ಣಾ-
ಬಿಡಿರಣ್ಣಾ-ಅತ್ತೆಮ್ಮ ತರುತ್ತಾಳೆ ಬಾಯಾರಿಕೆ| ಘುಮ್ಮ ಘುಲರೆನ್ನಿರೇ-||
ಕಾಳಿಯಾ ಕರೆದಾಹಾಲು-ಕೆಂದೇ-ಯ ಕರೆದಹಾಲು
ಹಿಂಡುಗೋವು ಕರೆದ ನೊರೆಹಾಲು ಸಕ್ಕರೆ| ಪುತ್ರಯ್ಯಗೆ
ಬಾಯಾರಿಕೆ ಕೊಡು ಬಾರೆ-ಘುಮ್ಮಾ ಘುಲರೆನ್ನಿರೇ...||

****

## ಮದುರಂಗಿ ಗಿಡ ತರುವ ಹಾಡು

ಕೋಳಿ ಕೂಗಕೆ ಮೊದಲು ಯಾರೂ ಏಳಕೆ ಮೊದಲು
ಅಣ್ಣಯ್ಯ ಬಂದು ಕರೆದಾನು ||
ತಾಯವ್ವ ನೀವು ಕೇಳಿ ತಾಯವ್ವ ನೀವುಕೇಳಿ ||

ಇನ್ನಾರು ತಿಂಗಳಿಗೆ ನಮ್ಮನೆಲಿ ಮದುವೆಯು |
ಮದುರಂಗಿಯಿಲ್ಲದೆ ಮದುವಿಲ್ಲ || ವೆಂದು ನುಡಿದು
ಮದುರಂಗಿ ಸಸಿ ತರಲು ಹೊರಟಾನು ||

ಜರಿಮುಂಡಾಸು ಬಿಗಿದು | ವಜ್ರಾಯುಧವನು ಹಿಡಿದು |
ಮದುರಂಗಿ ಸಸಿಯ ಬೆಲೆಮಾಡಿ || ತರಲೆಂದು
ಕುದುರೆ ಮೇಲೇರಿ ಹೊರಟಾನು||
ಅತ್ತ ಹೋದ ಗೆಲ್ಲು ಬಿಟ್ಟು ಇತ್ತ ಬಂದ ಗೆಲ್ಲು ಬಿಟ್ಟು
ನಟ್ಟ ನಡು ಬೆಳೆದಾ ಗೆಲ್ಲಿನ ಸಸಿ ತಂದು|
ಮುತ್ತಿನ ಚೌಕದಲಿ ಬಿಗುದಾನು ಅಣ್ಣಯ್ಯ ||

ಇಪ್ಪತ್ತೊಂದು ವರಹ ಕೊಡುಸ್ಯಾನು ಸಸಿಗೆ ಅಣ್ಣಯ್ಯ
ತನ್ನರ ಮನೆಗೆ ನಡುದಾನು||

ತಾಯವ್ವ ನೀವು ಕೇಳಿ| ತಾಯವ್ವ ನೀವುಕೇಳಿ|
ಮದುರಂಗಿ ಸಸಿ ನೆಡುವ ಸ್ಥಳ ಯಾವುದು ?
"ದೇವಡಿ ಪಟ್ಟಿಯು ಬಲು ಇಂಬು "ನೆಡಲೆಂದು
ತಾಯವ್ವ ಒಳಗಿಂದ ದೃಷ್ಟಿಗಾರತಿಯಾ ಬೆಳಗ್ಯಾರು||

ಕಲ್ಲು ವೊಡ್ಡನ ಕರೆಸಿ, ಕಲ್ಲು ಕಟ್ಟೆ ಕಟ್ಟುಸ್ಯಾನು|
ಮಣ್ಣುವೊಡ್ಡನ ಕರೆಸಿ| ಹೊಂಡವ ತೋಡುಸ್ಯಾನು|
ಹೆಡಿಗೆ ಗೊಬ್ಬರ ಹಾಕಿ| ಗಡಿಗೆ ನೀರನು ಹೊಯ್ದು |
ಮದುರಂಗಿ ಸಸಿಯ ನೆಡುಸ್ಯಾನು||

ಮದುರಂಗಿ ಕೊಯ್ಯಲು ಯಾರ್‍ಯಾರು ಬರಬೇಕು?
ಏಳಾಳಿಗಿಂತ ಹಿರಿಯಕ್ಕ ಬಂದರೆ|
ಚೆನ್ನಾಗಿ ಮದುರಂಗಿ ಕೊಯ್ಯುವಳು

ಮದುರಂಗಿ ಅರೆಯಲು ಯಾರ್‍ಯಾರು ಬರಬೇಕು ?
ಅಕ್ಕತಂಗಿಯರು ಬಂದು ಕಿರುತಂಗಿ ಅರೆದರೆ ಚೆನ್ನ |
ಮದುರಂಗಿ ಬಣ್ಣ ಬಲುಚೆನ್ನ |

ಮದುರಂಗಿ ಹಿಡಿಸಲು ಯಾರ್‍ಯಾರು ಬರಬೇಕು ?
ತಾಯಿ ಸೋದರದ ಹಿರಿಭಾವ ಬಂದರೆ
ಚೆಂದವಾಗಿ ಮದುರಂಗಿ ಹಿಡುಸ್ಯಾರು||

ಆ ಚಿತ್ರ ಬರೀರಣ್ಣ | ಈ ಚಿತ್ರ ಬರೀರಣ್ಣ
ಸೂರ್ಯದೇವರ ಚಿತ್ರ ಬಲಕೈಗೆ|
ಚಂದ್ರ ದೇವರ ಚಿತ್ರ ಎಡ... ಕೈಗೆ||

****

# ಮದುರಂಗಿ ಶಾಸ್ತ್ರದ ಸೋಬಾನೆ ಹಾಡು

ವಾಸುದೇವ ವಾಲ್ಮೀಕಿ ಮುನಿಗಳಿಂದಾ-ದ್ರೌಪದಿ,
ಪಾರ್ವತಿ ಐವರು ಸತಿಯವರು ಇವರೊಳಗೊಬ್ಬಳು-ರುಕ್ಮಿಣಿ
ದೇವಿಗೆ-ದಿನವೆಂಟರ ಅವಧಿಯ ಶುಭಲಗ್ನಕ್ಕೆ-ನೆರವೇರಿಸಿ
ಮದುರಂಗಿ ಸಸಿಯಾ ನೆನೆದ..ರು||

ತಂಗಿ : "ಅಣ್ಣನೆ ಕೇಳಣ್ಣಾ - ಬಣ್ಣಿಸುವುದೇತಕೆ? ನಮ್ಮ ಕಂದರ್ಪರ
ಮನೆ ಮುಂದೆ ಇರುವ ಮದುರಂಗಿಯು ಬಣ್ಣಕ್ಕೆ ಬಲು ಚಂದ"
ವೆನುತಾ -ತಂಗಿ ದ್ರೌಪದಿ ನುಡಿದಾ-ಳು||

ಅಣ್ಣ : ತಂಗಿಯೇಕೇಳಮ್ಮಾ, ದ್ರೌಪದಿಯೇ| ನಿನ್ನಯ ಕಂದರ್ಪರ
ಮನೆಮುಂದೆ ಇರುವ ಮದುರಂಗಿಯು ಬಣ್ಣಕ್ಕೆ ಬಲು
ಚಂದ" ಹೌದೆನುತಾ... ಅಣ್ಣಾ ಶ್ರೀ ಕೃಷ್ಣಾ-ನುಡಿದಾ-ನು||

ತಂಗಿ : ಅಣ್ಣನೆ ಕೇಳಣ್ಣ... ನಮ್ಮ ಭಾಗ್ಯದ ಬಯಲೊಳಗೆ ಇರುವ
ಮದುರಂಗಿ ಬಣ್ಣಕ್ಕೆ ಬಲುಚಂದವೆನುತಾ ನುಡಿದಳಾ-ತಂಗಿ||

ಅಣ್ಣ : ಬಣ್ಣದ ಮಾತುಂಟು| ಅಂದಿನ ದಿನದಲ್ಲಿ ಸೋದರ ಮಾವನು
ಕಟ್ಟಿದ| ಜೋಡ್ಪಣವು ಸೆರಗಿನಲಿ-ಉಂಟೆಂದು| ಅದರನು
ಕೊಟ್ಟು ಮದುರಂಗಿ ತರಿಸೆಂದೆನುತಾ...||

ನಾಲ್ವರು
ಅಕ್ಕತಂಗಿಯರು : ವದರಿಕಟ್ಟಿದಾ-ಮಂಡೆಯ ಮುಡಿಕೂದಲನು
ಬಿಗಿಕಟ್ಟಿ ಸತಿಯವರು ಚೌಕಿಯುವರ ಮನೆ ಮುಂದಾಗಿ ನಡೆದಾರು..||
ಅಂದದ ಮದುರಂಗಿಗೆ ಚಂದದಲಿ ಹೊರಡುವ ಪಯಣ
ಯಾವುದೆಂದು? ನಾಲ್ವರು ತಂಗಿಯರು ನುಡಿದಾ-ರು||
ನಮ್ಮಕ್ಕ ಪಡೆದಕ್ಕಾ- ಮದುರಂಗಿ ಸಸಿಗೆ ಹೊರಡುವ
ಪಯಣ ಸಾಗಲೀ|

ವದರಿ ಕಟ್ಟಿದ ಕೂದಲನು ಬಿಗಿಕಟ್ಟಿ ಸತಿಯವರು
ಪಟ್ಟೆಯ ಸೀರೆ ನೆರಿ ಹಿಡಿದು -ಕುತ್ತಿಣಿ ರವಿಕೆಗಳನು
ತೊಟ್ಟು| ಪಾರಿಜಾತವಾ ಮುಡಿದಾ-ರು||

*ಅಂದಕೆ ಗಂಧ ಧರಿಸಿ ಚಂದಕೆ ಕುಂಕುಮವಿಟ್ಟು|ಚಂದಕೆ*
*ಕೈಕನ್ನಡಿ ಹಿಡಿದು...ನಾಲ್ವರು ತಂಗಿಯರು ಹೊರಟಾರು|*
*ತಾಳ ಮೇಳವು ಬೇಕು-ಚಿಕ್ಕ ಮದ್ದಳೆ ನಮಗೆ -ಗಂಭೀರಕೆ*
*ಬೇಕು ನಮಗೆ ತಂಬೂರಿ....||*

*ಅಂದದಿ ಹೊರಟಾರು ಮದುರಂಗಿಗೆ| ಚಿನ್ನದ ಹರಿವಾಣ*
*ತೆಗೆದು ಪನ್ನೀರಲಿ ಬೆಳಗಿದರು| ತಾಳ ಮೇಳದಿಂದಲಿ|*
*ಮದ್ದಳೆಯಿಂದಲಿ ಭಾಗ್ಯದ ಬಯಲಿನ ಮುಂದಾಗಿ ನಡೆದಾರು||*

*ಭಾಗ್ಯದ ಮಧುರಂಗಿ ಮುಟ್ಟಿ ಶರಣವ ಮಾಡಿದರು|*
*ಎಸಳು ಎಸಳೂ ಸೊಪ್ಪು ತೆಗೆದಾರು-ಚಿನ್ನದ ಹರಿವಾಣದೊಳಗೆ*
*ತುಂಬಿರಿಸಿ | ಪಟ್ಟೆ ವಸ್ತ್ರಗಳನು ಮುಚ್ಚಿ| ಅಂದವುಳ್ಳ ಅರಮನೆ*
*ಮುಂದಾಗಿ | ಭಾಗ್ಯದ ಬಯಲೊಳಗೆ-ನಡೆ-ದಾರು||*

*ಕಂಬದಡಿಯಲಿ ಚಂದಣದ ಮಣೆ ತಂದಿರಿಸಿ|*
*ಮದುರಂಗಿ ಸೊಪ್ಪಾ-ಅರೆದಾರು|ಮದುರಂಗಿಗೆ*
*ಆರತಿಯನೆತ್ತಿದರು| ಹಸಿನೀರು ಬಿಸಿ ನೀರಿನಲಿ*
*ಕೈ ತೊಳೆದು ತೆಗೆದಾರು-||*

*ಅಷ್ಟೋತ್ತಿನ ಮುಖ ತೋರಣ ಮಂಟಪದ ಮುಂದೆ*
*ಕುಳ್ಳಿರಲು| ಕಟ್ಟಿ ಹುರಿಗೆಜ್ಜೆ ಹೊಡೆದು ಕೊಳ್ಳಿರಲು|*
*ಥಳ ಥಳಿಸುವ ಮುಖಗಳನ್ನು ಪನ್ನೀರಲಿ ತೊಳೆದು|*
*ಚಿನ್ನದ-ಚಪ್ಪರದೊಳಗೆ ಬಂದು-ಕೂಡಿದರು||*

*ಸರ್ವಾಭರಣವನ್ನಿಟ್ಟರು ಸತಿಯವರು| ಶೋಕ ಸಂಜೀವಿನಿಕಡ್ಡಿ*
*ತೆಗೆದಾರು| ಸೂರ್ಯನ-ಅಕ್ಷಿ ತಿದ್ದಿ-ದಾರು|*
*ಚಂದ್ರನಾ ಬಣ್ಣಾ ಬರೆ-ದಾರು...||*

****



# ದಿಬ್ಬಣ ಹೊರಡಿಸುವಾಗ ಹೇಳುವ ಸೋಬಾನೆ ಹಾಡು

ಅರಮನೆ ಸಾರಿರಿಸಿ, ರಂಗೋಲೆ ಬರೆದಿರುಸಿ|
ಮಗನಾ ಶೃಂಗರಿಸಿ ಒಳಗಿಂದಾ-ತಾಯವ್ವಾ-|ಚಿನ್ನದ ಪೆಟ್ಟಿಗೆ ತಂದಿರುಸಿ|

ಉಪ್ಪರಿಗೆ ಸಾರಿರಿಸಿ| ರಂಗೋಲೆ ಬರೆದಿರುಸಿ|
ಮಗನಾ ಶೃಂಗರಿಸಿ-ಒಳಗಿಂದಾ-ತಾಯವ್ವಾ-ಹಣದಾ ಪೆಟ್ಟಿಗೆ ತಂದಿರುಸಿ|

ಏಳೇಳು ಇಂದ್ರನೇ-ಏಳೇಳು ಚಂದ್ರನೇ| ಏಳೇಳು ಗಂಭೀರ-ಗರುಢಾ-ನೆ-||
ಏಳೇಳೆಂದರೆ ಏಳುವವನು ನಾನಲ್ಲಾ-|ನನ್ನ ಸೋದರತ್ತೆ ಮಾವಂದಿರು ಬರಬೇಕು|
ಹಸೆ ಮೇಲಿಂದ ಒಂದೋಲೆ ಬರೆದಾನು ಅಣ್ಣಯ್ಯ|ಓಲೆ ಕಂಡಾಕ್ಷಣ ಬರಬೇಕು|

ಓಲೆ ಕಂಡಾಕ್ಷಣ ಬರಬೇಕು ಮಾವನವರೇ|ಕೂತಲ್ಲಿಂದ ಒಂದೋಲೆ ಕಳುಹೀ-ದ|
ಓಲೆಯ ತಕ್ಕೊಂಡು ಹೋದಾರು ಹಿರಿಯಣ್ಣಾ|ಸಣ್ಣಕ್ಕಿ ಬಯಲಲ್ಲಿ ನಡೆದಾರು||

ದೂರದಿಂದಲಿ ಮಾವನವರು|ಅಳಿಯಾ ಬರುವುದ ಕಂಡು|
ಎಡಹಾದೀಲಿ ಹೋಗುತಾರೋ ಬಲಹಾದೀಲಿ ಹೋಗುತಾರೊ-
ನಮ್ಮ ರಾಮ ಅರಮನೆಗೆ|

ಬೆಳ್ಳಿಯ ಗಿಂಡಿ ಬೆಳಗಿದರು ಅತ್ತೆಮ್ಮಾ |ಚಿನ್ನದ
ಹರಿವಾಣ ಎದುರಿ-ಗೆ ಹಾಲು ನೀರು ತಕ್ಕೊಂಡು ಹೋದಾರು|

ನೀರನ್ನೆ ತೆಗೆದು ಕೈಕಾಲು ಮುಖ ತೊಳೆದು|ಹಾಲನ್ನೇ ಕುಡಿದು
ಬಾಯಾರಿಕೆ ಕಳೆದು|ತೂಗುವ ಮಂಚದಲಿ ಕೂತಾ-ನೀಗಾ||

ಏನಾಗಿ ಬಂದೀರಳಿಯಾ? ಎಂತದಾಗಿ ಬಂದಿರಿ ಅಳಿಯಾ?
ಬಂದಂತಹ ಕಾರ್ಯಗಳಾ-ತಿಳುದ್ಹೇಳಿ-||

ಓಲೆಯನ್ನು ತೆಗೆದು ಕೊಟ್ಟಾನು ಅಣ್ಣಯ್ಯ|ಬೇಗ ಬೇಗ
ಓಲೆ ಓದಿ ನೋಡಿದರು ಮಾವಯ್ಯ|ಬೇಗದಿಂದ ಓಲೆ ಓದಿದ-ರು||

ಮಡದಿಯೆ ನೀ ಕೇಳು| ಮಡದಿಯೆ ನೀ ಕೇಳು
ನೂರೊಂದು ಅನ್ನದಡಿಗೆ ಮಾಡು ಬೇಗಾ||

ದೊಡ್ಡ ಮಾಳಿಗೆಯೊಳಗೆ ನಡೆದಾರು ಮಾವನವರು
ಪೆಟ್ಟಿಗೆ ಕೀಲು ಸಡಿಲಿರಿಸಿ ಮಾವಯ್ಯ| ಕೋಲ್ಕಂಬಿ ಧೋತ್ರಾ ತೆಗೆದಾರು||

ಮುದ್ರೆ ಮುಂಡಾಸು ತೆಗೆದು ಎರಕಾಗಿ ಇರಿಸಿ | ಅಳಿಯನರಮನೆಗೆ
ಹೊರಟಾರು| ಜರತಾರಿ ವಲ್ಲಿಯ ಹೆಗಲಾ ಮೇಲಿರಿಸಿ |ಆಳುದ್ದ
ಕೋಲ್ಕೊಡೆ ಹಿಡಿದಾರು ಮಾವಯ್ಯ| ಅಳಿಯನರಮನೆಗೆ ನಡೆದಾರು||

ಅತ್ತೆಮ್ಮ ಎದ್ದಾರು। ಸಣ್ಣ ಮಾಳಿಗೆಯೊಳಗೆ ನಡೆದು।
ಸಣ್ಣ ಪೆಟ್ಟಿಗೆಯಾ ತೆಗೆದಾರು।ಪೆಟ್ಟಿಗೆ ಕೀಲು ಸಡಿಲಿರಿಸಿ।
ಜರಿ ಬಂದ ಸೀರೆಯಾ-ಉಟ್ಟಾರೀಗಾ-।।
ಗುರುಗುಂಜಿ ಬಣ್ಣದ ರವಿಕೆಯ ತೊಟ್ಟಾರು।
ಅತ್ತೆಮ್ಮಾ।ಅಳಿಯ ನರ-ಮನೆಗೆ ಹೊರಟಾರು।।
ಮಂಡೆ ಬಾಚಿದರು। ಮಲ್ಲಿಗೆ ಹೂ ಮುಡಿದಾರು।
ಅತ್ತೆಮ್ಮ। ಮುನ್ನಲ್ಲಿ ಮುನ್ನೂರು ವರಹ ಕಟ್ಟಿ।
ಅಳಿಯನ ಅರಮನೆಗೆ ಹೊರಟಾರು-।।
ಸೆರಗಲ್ಲಿ ಸೆರೆಹೊನ್ನಾ ಕಟ್ಟಿದರು ಅತ್ತೆಮ್ಮಾ।
ಸಣ್ಣಕ್ಕಿ ಬಯಲಲ್ಲಿ ಹೋದಾರೀಗಾ-।।
ದೂರದಿಂದಲಿ ಅಳಿಯ ನೋಡುತಾನೆ-ನನ್ನತ್ತೆ
ಮಾವನವರು ಸಣ್ಣಕ್ಕಿ ಬಯಲಲ್ಲಿ ಬರುತಾರೆ।
ಎದುರಿಗೆ ಹಾಲು ನೀರು ತಕ್ಕೊಂಡು ಹೋಗಿರೆಂದು
ಅಣ್ಣಯ್ಯ - ಹೇಳಿದನು।।
ಎದುರಿಗೆ ಹಾಲು ನೀರು ತಂದಾರೀಗಾ-ನೀರನ್ನೆ
ತೆಗೆದು ಕೈಕಾಲು ಮುಖ ತೊಳೆದು। ಹಾಲನ್ನೆ ಕುಡಿದು
ಬಾಯಾರಿಕೆ ಕಳೆದು।ತೂಗುವ ಮಂಚದಲಿ ಕೂತರೀಗಾ-।।
ಸೂಡಿ ಸೂಡಿ ವೀಳ್ಯವ ಹರಿವಾಣದೊಳಗಿರಿಸಿ। ಮಾವಗೆ
ವೀಳ್ಯವ ಕೊಡಿಸಿದರು ಅಣ್ಣಯ್ಯಾ। ವೀಳ್ಯವನು ಮೆದ್ದಾರು ಮಾವನವರು।
ಅಳಿಯನ ಸೆರಗಿಗೆ ಕಟ್ಟಿದರು ಮಾವಯ್ಯ। ಅತ್ತೆಮ್ಮ
ಎದ್ದಾರು ಸೆರಗಿನಿಂದ ಸೆರೆಹೊನ್ನಾ ಬಿಚ್ಚಿ। ಅಳಿಯನ
ಸೆರಗಿಗೆ ಕಟ್ಟಿದರು।।ಏಳೇಳು ಇಂದ್ರನೇ।ಏಳೇಳು
ಚಂದ್ರನೆ।ಏಳೇಳು ಗಂಭೀರ ಗರುಢನೆ-।।
ಹಸೆ ಮೇಲಿಂದಾ-ಎದ್ದಾನು ಮದುವಣ್ಣಾ
ಅಕ್ಕಾ-ಬಾರಕ್ಕಾ। ಕಳಸ ಕನ್ನಡಿ ಹಿಡಿ ನೀನೂ-।
ಮುತ್ತಿನ ಮೆಟ್ಟು ಕಲ್ಲು ಇಳಿ ಮುಂದೆ-।।
ಅಕ್ಕಾ-ಬಂದ-ಳು ಕಳಸ ಕನ್ನಡಿ ಹಿಡಿಯಲಿಕೆ।
ತಾಯವ್ವ ಎದ್ದಾರು।ಕಳಸ ಕನ್ನಡಿ ತೆಗೆದು
ಮಗಳಾ-ಕೈಯಲ್ಲಿ ಕೊಟ್ಟಾರೀಗಾ।।

ಮುತ್ತಿನ ಮೆಟ್ಟುಕಲ್ಲು ಇಳಿದಾಳು ಅಕ್ಕಯ್ಯಾ|ಚಪ್ಪರದ
ಒಳಮಧ್ಯೆ ಮುತ್ತಿನ ಮೇಲ್ಕಟ್ಟಡಿಯಲ್ಲಿ|ದಿಬ್ಬಣ ಇಳಿದು ನಿಂತರೀಗಾ||

ಹತ್ತು ಬೆರಳಿಗೆ ಕೆತ್ತಿಸಿದ ಉಂಗುರವನ್ನಿಟ್ಟು |ತಂದೆಗೆ
ವೀಳ್ಯವ-ಕೊಟ್ಟಾನೀಗಾ-||ತಂದೆ ಪಾದ ಹಿಡಿದು ಶರಣವ ಮಾಡಿದನು...||

ಆಯುಷ್ಯವಂತನಾಗು ಮಗನೇ|ಭವಿಷ್ಯಕ್ಕೆ
ದೊಡ್ಡವನಾಗು|ಪುತ್ರರ ಫಲವಾ ಪಡೆ ನೀನು ಎಂದಾರು||

ಹತ್ತು ಬೆರಳಿಗೆ ಕೆತ್ತಿಸಿದ ಉಂಗುರವನ್ನಿಟ್ಟು|ಮಾವನಿಗೆ
ವೀಳ್ಯವ ಕೊಟ್ಟಾನು ಮದುವಣ್ಣಾ|ಮಾವ ಬುದ್ಧಿಯ ಹೇಳಿದರು||

ಮಾವನವರಮನೆಲಿ ಭಾವ ಮಕ್ಕಳು ಹೆಚ್ಚು |ಬಲು
ಜೋಕೆಯಿಂದಲಿ ಹೋಗಿ ಬರಾ-ಬೇಕು|

ಕುದುರೆ ಮೇಲೇರಿ ಹಿಂದೆ ತಿರುಗಿ ನೋಡಿದನು | ಮಂದಿ
ಸಾಲದೆಂದು ಮೊಗಬಾಡಿ-ರಾಗಿ ಕಾಳಂತೆ ರಾಜ್ಯೆಲ್ಲಾ ನನ
ಬಳಗಾ-ಬಳಗಕ್ಕೊಂದೋಲೆ ಬರೆದಾನು||

ಕುದುರೆ ಮೇಲೇರಿ ಹಿಂದೆ ತಿರುಗಿ ನೋಡಿದನು | ಮದುವಣ್ಣಾ
ಸಾಸಿವೆ ಕಾಳಂತೆ ಊರೆಲ್ಲಾ ಅಕ್ಕತಂಗಿಯರು|
ಊರಿಗೆ ಒಂದೋಲೆ ಬರೆದಾನು||

ಹಿಂದೆ ಸಾವಿರ ಮುಂದೆ ಸಾವಿರಾ-ಎರಡು ಸಾವಿರ ಜನರೆಲ್ಲಾ
ದಿಬ್ಬಣವನ್ನೇ ಹೊರಟಾರು||

ಮಾವನರವರ ಮನೆಲಿ ಅತ್ತಿಗೆ ನಾದುನಿಯರು ಬಲು ಹೆಚ್ಚು
ವೀಳ್ಯದಲಿ ಕಪಟಾ-ತಂದಿರುಸ್ಯಾರು|| ಮಗನೇ ಬಲು ಜೋಕೆಯಲಿ|
ಕನ್ಯೆಯ ಕರಕೊಂಡು-ಬರಾಬೇಕು ಮಗನೆ ಅರಮನೆಗೆ||

****



# ದಿಬ್ಬಣ ಹೊರಡಿಸುವ ಹಾಡು

ಉಪ್ಪರಿಗೆ ಮನೆಯಿರುವ ಪಾರ್ವತಿ ಮಗಳಿಗೆ
ಒಂಬತ್ತು ಮಕ್ಕಳ ಕೋಟೆ ದಾಯಂಗಳಾಡುತ್ತಾ ನಲಿಯುತ್ತಾ||
ದಾಯಂಗಳಾಡುತ್ತಾ ನಲಿಯುತ್ತಾ ದೊರೆರಾಯಾ |
ತಟ್ಟನೆ ಇಳಿಮಗನೆ ಸಭೆಮುಂದೆ||
ಉಡುದಾದ್ರೆ ಧೋತ್ರಯಿಲ್ಲಾ |ಹಿಡಿಯೋಕೆ ಶಾಲಿಲ್ಲಾ
ನಾನ್ಹ್ಯೇಗೆ ಬರಲಿ.. ಸಭೆಮುಂದೆ||

ಉಡೊದಾದ್ರೆ ಧೋತ್ರವುಂಟು ಹಿಡಿಯೋಕೆ ಶಾಲುಂಟು
ಬೇಕಾದಾಭರಣ ನಿನಗುಂಟು||
ಬೇಕಾದಾಭರಣ ನಿನಗುಂಟು ಕಂದಯ್ಯಾ|
ತಟ್ಟನೆ ಇಳಿಮಗನೇ ಸಭೆಮುಂದೆ||

ಉಪ್ಪರಿಗೆಯೊಳಗೆ ಎಂಟು ಮಕ್ಕಳ ಕೋಣೆ|
ದಾಯಂಗಳಾಡುತ್ತಾ ನಲಿಯುತ್ತಾ ದೊರೆರಾಯಾ
ತಟ್ಟನೆ ಇಳಿಮಗನೇ ಸಭೆಮುಂದೆ||

ಕೊರಳಿಗೆ ಪದಕವಿಲ್ಲಾ - ಕೈಗೆ ಹಿಂಬಳೆ ಇಲ್ಲಾ |
ಬೇಕಾದಾಭರಣ ನನಗಿಲ್ಲಾ ಎಲೆತಂದೆ
ನಾನ್ಹ್ಯೇಗೆ ಬರಲಿ ಸಭೆಮುಂದೆ||

ಕೊರಳಿಗೆ ಪದಕವುಂಟು ಕೈಗೆ ಹಿಂಬಳೆವುಂಟು||
ಬೇಕಾದಾಭರಣ ನಿನಗುಂಟು ಎಲೆಮಗನೆ|
ತಟ್ಟನೆ ಇಳಿಮಗನೆ ಸಭೆಯ ಮುಂದೆ||

ತಂದೆಯವರೆ ನೀವು ಹೋಗಿ ಕೈ ಹಿಡಿದುಕರೆತನ್ನಿ
ಸೋಬನದ ಮದುಮಗನಾ ಸಭೆಮುಂದೆ
ಉಪ್ಪರಿಗೆ ಮನೆಯಿರುವ ಪಾರ್ವತಿ ಮಗಳಿಗೆ
ಎಂಟು ಮಕ್ಕಳ ಕೋಣೆ| ದಾಯಂಗಳಾಡುತ್ತಾ ನಲಿಯುತ್ತಾ
ದೊರೆಮಗನೆ| ತಟ್ಟನೆ ಇಳಿ ನೀನು ಸಭೆ ಮುಂದೆ

ಕೈ ಬೆರಳಿಗೆ ಉಂಗುರವಿಲ್ಲಾ| ಕಾಲಿಗೆ ಕಾಲು ಬಳೆಯಿಲ್ಲಾ
ಬೇಕಾದಾಭರಣ ನನಗಿಲ್ಲಾ |ಬೇಕಾದಾಭರಣ ನನಗಿಲ್ಲ
ತಂದೆಯವರೇ, ನಾನ್ಹ್ಯೇಗೆ ಬರಲಿ ಸಭೆಮುಂದೆ||

ಕೈ ಬೆರಳಿಗೆ ಉಂಗುರವುಂಟು| ಕಾಲಿಗೆ ಕಾಲು ಬಳೆವುಂಟು|
ಬೇಕಾದಾಭರಣ ನಿನಗುಂಟು ನನ ಕಂದಾ| ತಟ್ಟನೆ ಇಳಿ ನೀನು ಸಭೆ ಮುಂದೆ|
ಮಾಳಿಗೆ ಯೊಳಗಿಂದ ಇಳಿದಾನು ಕಂದಪ್ಪಾ|
ಸ್ವಾಮಿಗೆ ಶರಣೆಂದು |ಭೂಮಿಗೆ ಶರಣೆಂದು
ನಂದಾದೀವಿಗೆಗೆ ಶರಣು ಶರಣವ ಮಾಡ್ಯಾನು
ದಿಬ್ಬಣಕೆ ಅಣಿಯಾಗಿ ಹೊರಟಾನು|

ಆನೆಯ ಸಿಂಗರಿಸಿ ಮೇಲ್ಕಟ್ಟು ಅಡಿಯಲ್ಲಿ |
ಆನೆಗೆ ಅಂಬಾರಿ ಬಿಗುಸ್ಯಾರು|
ಕುದುರೆಯ ಸಿಂಗರಿಸಿ ಚಪ್ಪರದಡಿಯಲ್ಲಿ |
ಕುದುರೆಗೆ ಜೀನಾದ ಬಿಗುಸ್ಯಾರು|
ಒಂಟೆಯ ಸಿಂಗರಿಸಿ ಮಂಟಪದಡಿಯಲ್ಲಿ |
ಒಂಟೆಗೆ ವಜ್ರ ವೈಡೂರ್ಯ ತೊಡುಸ್ಯಾರು||
ಅದುನೂರು ಅಡಿಕೆ ತುಂಬಾ | ಇದು ಹೇರು ತುಂಬಾ
ಮಾವನರ ಮನೆ ನಡುಗಲಿ ||
ಮಾವನವರ ಮನೆಲಿ ಭಾವಮೈದುನರು ಬಲು ಹೆಚ್ಚು
ಮುತ್ತಿನಂತ ರುಮಾಲು ಬಲೂ ಜತನ||
ಅತ್ತೆಯರ ಮನೆಲಿ ಅತ್ತಿಗೆ ನಾದುನಿಯರು ಬಲು ಹೆಚ್ಚು |
ವೀಳ್ಯದಲಿ ಕಪಟಯಿರುಸ್ಯಾರು|
ನಂದಾದೀವಿಗೆಗೆ ಅಕ್ಕಿಟ್ಟು ಶರಣವ ಮಾಡಿ
ಹಿರಿಯರ ಪಾದಕ್ಕೆ ಶರಣೆಂದು|
ಕೂಡಿದ ಸಭೆಗೆಲ್ಲಾ ಶರಣೆಂದು ಕೈಮುಗಿಯುತ್ತಾ
ಹಿಂದೆ ನೂರಾಳು ಮುಂದೆ ಮೂರಾಳು ನಡು ಮಧ್ಯದಲಿ
ಮದುವಣ್ಣ ದಿಬ್ಬಣವನ್ನೇ ಹೊರಟಾರು|
ಸೋಬಾನೆ ಎಂದು ಹಾಡಿದರು ಸೋಬಾನೆ|

# ದಿಬ್ಬಣ ಬಂದು ಕೂತಾಗ
# ಅತ್ತೆ ಅಳಿಯನನ್ನು ನೋಡುವ ಹಾಡು

**ಚೌ**ಣೆ ಕಲ್ಲಿನ ಮೇಲೆ ಸರಮುತ್ತು ಸುರಿಯೋಣ|
ಸೂರ್ಯ ಮಂಡಲದಾ ಕೊಡೆ ಬಂತು ನಿಮ್ಮ ನೆಗೆ ಅತ್ತೆ ನೋಡತ್ತೆ ಅಳಿಯಾನಾ||
ಚಪ್ಪರಕೆ ದೀವಿಗೆ ಬೇಗ ತಂದಿರಿಸಿ|
ಅರ್ಕಮಂಡಲದಾ ಕೊಡೆ ಬಂತು ನಿಮ್ಮ ನೆಗೆ ಅತ್ತೆ ನೋಡತ್ತೆ ಅಳಿಯಾನಾ||
ಬಾಲನು-ಹುಟ್ಟುವಾಗ| ಘಂಟೆ ಬಾರಿಸುವಾಗ|
ಬಾಯಿಗೆ -ಬಜೆ-ಬೆಣ್ಣೆ ಕೊಡುವಾಗ -|ಆಗ ನೋಡಿದೇನೆ ಅಳಿಯಾನಾ|
ಪುತ್ರನು ಹುಟ್ಟುವಾಗ| ಬಟ್ಟಾಲು ಬಾರಿಸುವಾಗ|
ನಾನಾರಾಗಗಳು ನುಡಿಸುವಾಗ| ಆಗ ನೋಡಿದೇನೆ ಅಳಿಯಾನಾ||
ಯಾವಾಗಲೂ ನಮ್ಮ ನೆಗೆ ಪಗಡೆಯಾಟಕೆ
ಬರುತ್ತಿದ್ದ | ಆಗ ನೋಡಿದೇನೆ ಅಳಿಯಾ-ನಾ||
ನಿತ್ಯ-ಬೆಳಗಾಗಲು ನಮ್ಮ ನೆಗೆ|ಚೆಂಡಾಡಲು
ಬರುತ್ತಿದ್ದ-| ಆಗ ನೋಡಿದೇನೆ ಅಳಿಯಾನಾ||
ಅಂದೊಂದು ಹೆಚ್ಚೇನು| ಇಂದೊಂದು ಕುಂದೇನು|
ಇಂದೊಂದು ಧೋತ್ರಾ ಹೆಗಲಲ್ಲಿ ಟ್ಟಿದೀರಿ|| ಧಾರೆಯು ನೋಡಿ ಅಳಿಯಾನಾ||
ಮಾಳಿಗೆ ಮನೆಕಂಡು |ಜೋಳಿಗೆ ಹೊನ್ನ ಕಂಡು
ಅಳಿರಾಯರ ಗುಣಕಂಡು|ಮೇಲಾಗಿ ಮಗಳಾ ಕೊಡಬೇಕು||

****



# ವಧುವಿಗೆ ಬಣ್ಣ ಬಂಗಾರ ಇಡುವಾಗ

ಮುತ್ತಿ ನಾ-ಚೆಂಡು-ಮೂವತ್ತು ನವಿಲ್ಹಕ್ಕಿ-ಹೋಗೀ-
ಮಾತಾಡುವ-ಒಲಿಮಾಲೆ|| ಕಂಚಿಗೂ-ಪುರದಿಂದೋದಿಸುವಾ-ರೂಪಾಗಳಾ...||
ಹವಳಾ-ದ ಚೆಡು ಹದಿನಾರು ನವಿಲ್ಹಕ್ಕಿ ಕರೆದು
ಮಾತಾಡುವ-ಒಲಿಮಾಲೆ ಕಂಚಿಗೂ ಪುರದಿಂದೋದಿಸುವಾ-ರೂಪಗಳಾ...||
ಚಿನ್ನಾದ ಚೆಂಡು ಹನ್ನೆರಡು ನವಿಲ್ಹಕ್ಕಿ-ನಿಂತು-
ಮಾತಾಡುವ-ಒಲಿಮಾಲೆ|| ಕಂಚಿಗೂ ಪುರದಿಂದೋದಿಸುವಾ-ರೂಪಾಗಳಾ...||
ಹೋದ-ಹೋದಲ್ಲಿ ಗೆಲ್ಲಾ-ಬಾಲಯ್ಯಗೆ-ಗುಡಿಹೊಯ್ಸಿ-|
ಬಾಲಯ್ಯಗೆ ಹಾಲಾ ಕೊಡುವಳು-ಸೋಬನದವಳು-|
ಸಾಗಿ-ಸೋಬನಕೆ-ಬರಾ-ಹೇಳಿ...||
ನಿಂತಾ-ನಿಂತಲಿಗೆಲ್ಲಾ ಕಂದಯ್ಯಗೆ ಗುಡಿಹೊಯಿಸಿ-
ಕಂದಯ್ಯಗೆ ಹಾಲಾ ಕೊಡುವಳು |ಸೋಬನದವಳು
ಸಾಗಿ-ಸೋಬನಕೆ ಬರಾ-ಹೇಳಿ...||

ದಿಬ್ಬಣದವರು : ಆ ಊರು ಮಳೆ ಬಂದು-ಈ ಊರು ಹೊಳೆ ತುಂಬೀ-
ಗುತ್ತಿ-ಸಾಗರದ ಹೊಸಮಳೆ -ಬಂದು ಮಾವನವರೇ-
ನಮಗೊಂದು ದೋಣಿ-ಕಳೂ-ಹಿರಿ...||

ಮನೆಯವರು : ನಮಗಿಲ್ಲ-ದ ದೋಣಿ-ನಾವೆಲ್ಲಿಂದ ಕಳುಹಾಲೋ-
ನಿಲ್ಲಲಿ ದಿಬ್ಬಣ ಹೊಳೆ-ತಾವಾ...||

ದಿಬ್ಬಣದವರು : ಆ ಊರು ಮಳೆ ಬಂದು| ಈ ಊರು ಕೆರೆ ತುಂಬಿ-|
ಗೋವೆ-ಸಾಗರದಾ-ಹೊಸ ಮಳೆ ಬಂದು ಮಾವನವರೇ-|
ನಮಗೊಂದು ಚಿಮಣಿ ಕಳು-ಹಿರಿ...||

ಮನೆಯವರು : ನಮಗಿಲ್ಲದ ಚಿಮಣಿ ನಾವೆಲ್ಲಿಂದ ಕಳುಹಾಲೋ?
ಮೆಲ್ಲಗೆ ಸಾಗೀ-ಬರಾಹೇಳಿ-ಎಂದಾಗವರ ಮಾವ
ಮುದ್ರಾ-ದುಂಗುರವಾ-ಕಳುಹ್ಯಾರು...||

ದಿಬ್ಬಣದವರು : ಗದ್ದೆ ಏರಿಯ ಮೇಲೆ ಇರುವೆ ಸಾಲಿಟ್ಟಂತೆ|
ದಿಬ್ಬಣ ನಿಮ್ಮ ನೆಗೆ ಬರುತೇವೆ ಮಾವನವರೇ-|
ನಮಗೊಂದು -ಹೊತ್ತ ಕಳು-ಹಿರಿ||

ಮನೆಯವರು : ನಮಗಿಲ್ಲದ ಹೊತ್ತ ನಾವೆಲ್ಲಿಂದಾ -ಕಳು-ಹಾಲೋ-
ಕನ್ನೆಯವರ ಓಲೆ ಬೆಳಕಿನಲಿ ಬರಾ-ಹೇಳಿ...||

ದಿಬ್ಬಣದವರು : ಗದ್ದೆ-ಏರಿಯ ಮೇಲೆ ಗುಬ್ಬಕ್ಕಿ ಸಾಲಿಟ್ಟಂತೆ|
ದಿಬ್ಬಣ ನಿಮ್ಮ ನೆಗೆ ಬರುತ್ತೇವೆ. ಮಾವನವರೆ-|
ನಮಗೊಂದು ಬೆಳಕಾ-ಕಳು-ಹಿರಿ....||

ಮನೆಯವರು : ನಮಗಿಲ್ಲದ ಬೆಳಕಾ ನಾವೆಲ್ಲಿಂದ ಕಳುಹಾಲೊ|
ನಿಸ್ತ್ರೀಯವರ ಕೊಪ್ಪಿನ ಬೆಳಕಿನಲಿ ಸಾಗಾ ಬನ್ನಿ...||

ದಿಬ್ಬಣದವರು : ದೂರದ ದಿಬ್ಬಣ ಧೂಳೆದ್ದು ನಾವು ಬಂದೊ|
ಗುಡ್ಡೆಯ ನವಿಲೆಲ್ಲಾ ಬೆದರ್‍ಯಾವು|ಗುಡ್ಡೆಯ ನವಿಲೆಲ್ಲಾ ಬೆದರಿ
ಬೆಟ್ಟವ ಸೇರಿ ಒಪ್ಪೊತ್ತಿನ ಮೇವು ತಡವಾದೋ...||

ಹತ್ತಿರದ ಘಟ್ಟಾ-ವ-ಹತ್ತೀತು ನಮ್ಮ ದಿಬ್ಬಣಾ
ಹಟ್ಟಿ ದನವೆಲ್ಲಾ ಬೆದರಿ ಬೆಟ್ಟವ ಸೇರಿ|
ಒಂದೊತ್ತಿನ ಮೇವು ತಡವಾದೋ-|

ಹತ್ತಲಾರದ ಘಟ್ಟಾ-ವ -ಹತ್ತೀತು ನಮ್ಮ ದಿಬ್ಬಣಾ||
ಹತ್ತು ಕೊಪ್ಪರಿಗೆ ಬಿಸಿನೀರು -ಬಾಳೆಯ ಹಣ್ಣು|
ಬಚ್ಚಲು ಮನೆಯಲ್ಲಿಡ ಹೇಳಿ...||

ಇಳಿಯಲಾರದ ಘಟ್ಟಾವ ಇಳಿದೀತು ನಮ್ಮ ದಿಬ್ಬಣಾ|
ಏಳು ಕೊಪ್ಪರಿಗೆ ಬಿಸಿನೀರು ನಿಂಬೆಯ ಹಣ್ಣು|
ಬಚ್ಚಲು ಮನೆಯಲ್ಲಿಡ ಹೇಳಿ...||

ಹಾರುವರ ಮನೆಮುಂದೆ ಹಟ್ಟಿ ಕೆಸರು ಪಟ್ಟಿ ಕೆಸರು
ನೇವಳ ಜಾರಿದರೆ ಮಳಲಿಗೆ ಮಾವನವರೇ...ಹೂಹಾರದ
ಬಾಣ ಬಿಡುತಾನೆ ಆಚೆಲೊಬ್ಬ ಮುತ್ತಿನ ಚೆಂಡಿಡಿದು ಬಲು ಜತನಾ...||

ಹವಳದಂತಹ ಬಯಲಲ್ಲಿ ಹವಳದಂತಹ ದೊರೆರಾಯಾ|
ಹವಳ ಚೆಲ್ಲಾಡಿ ಬರುತಾನೆ ಹವಳ ಬೇಕೊ ಚಪ್ಪರಕೆ?
ಹವಳ ಬೇಕೊ ಚಾವಡಿಗೆ? ಹವಳ ಬೇಕೋ ಮಾವನ ಮಗ...ಳಿಗೆ?

*ಮುತ್ತಿನ ಚಪ್ಪರದಡಿಯಲ್ಲಿ | ಚಿನ್ನಾದ ಮಣೆ ಇರಿಸಿ|*
*ನಂದಾದೀವಿಗೆ ಎದುರೀಗೆ|*
*ಬಾಳೆಯ ಹಣ್ಣಾ ನೋಡಿ|*
*ಬಾಲೆಯವರು ಬರುವುದ ನೋಡಿ|*
*ಬಾಗಂಚಿನ ಸೀರೆ ಸೆರಗಾ ನೋಡಿ....||*
*ಬಾಲೆಯವರು ಬರುವುದೊಂದು ಬೆಡಗಾ ನೋಡಿ...||*

*ನಿಂಬೆಯ ಹಣ್ಣಾ ನೋಡಿ| ರಂಬೆಯವರು ಬರುವುದ ನೋಡಿ|*
*ರಂಗಚಿನ ಸೀರೆ ಸೆರಗಾ ನೋಡಿ*
*ಚಿಕ್ಕಂಚಿನ ಸೀರೆ ಸೆರಗಾ ನೋಡಿ...||*

*ಹಿಂಗಡಗ ಮುಂಗಡಗ |ಬೆಳ್ಳಿಯ ಎಂಟು ಕಡಗ|*
*ಆಚೆಯಲೆಂಬುವುದು ಅರಳೋಲೆ ಕಡಗ| ಒಪ್ಯಾವೆ*
*ಮಾವ ನಿಮ್ಮ ಮನಸ್ಸೀಗೆ ? ಮಗಳಿಗೆ ತೋರೀರಿ. ನಿಮ್ಮ ಸಭೆಗೆಲ್ಲಾ...|*
*ಓಲೆಗೆ ಚಿನ್ನ ಕೊಂಡು ವೈನಾದು ತಿರುಗಿ...ದೊ|*
*ವೈನಾಡಗಸಾಲೆ ಮನೆಲಿಲ್ಲಾ ಮಂಟಪದಲಿಲ್ಲಾ|*
*ಓಲೆ ತಿದ್ದುವಾಗ ಬೆಳಗಾದೊ...||*

*ಮೂಗುತಿ ಚಿನ್ನಕೊಂಡು, ಮೂತ್ತೂರ ತಿರುಗೀದೊ-*
*ಮುತ್ತೂರಗು ಸಾಲೆ ಮನೆಲಿಲ್ಲಾ ಮಂಟಪದಲಿಲ್ಲಾ-|*
*ಮೂಗುತಿ ಕೊಳ್ಳುವಾಗ ಬೆಳಗಾದೊ||*

*ಸೀರೆ ತಂದಿದೇವೆ ಹನ್ನೆರಡು ವರಹದ ಪಟ್ಟೆ|ಆದಾವೋ*
*ಮಾವ ನಿಮ್ಮ ಮಗಳಿಗೆ ಮಾವನವರೇ-ತೋರೀರಿ ನಿಮ್ಮ ಸಭೆಗೆಲ್ಲಾ |*

*ರವಿಕೆ ತಂದಿದೇವೆ ಬಟ್ಟು ಕುಚ್ಚದ ಪಟ್ಟೆ*
*ಆದಾವೊನಿಮ್ಮ ಮಗಳಿಗೆ ಮಾವನವರೇ ತೋರೀರಿ ನಿಮ್ಮ ಸಭೆಗೆಲ್ಲಾ||*

****

# ನೆಲ್ಲಕ್ಕಿ ಹಸೆಯಲ್ಲಿ
# ಹೆಣ್ಣು ಹಿಡಿಯುವ ಸೋಬಾನೆ

ಮುತ್ತಿನ ಹೊರಗೋಡೆ ಮುತ್ತಿನ ಒಳಗೋಡೆ |
ಮುತ್ತು ಹನಿಸಿದ ಅರಮನೆ ಯೊಳಗಿರುವ ಕನ್ಯೆಯ ನೀಚೆಗೆ ಕರೆತನ್ನಿ....|
ಪಟ್ಟೆ ಶ್ಯಾಲೆಯೊಳಗೆ ಮುಚ್ಚಿಟ್ಟ ಮಗಳು ಸಿಕ್ಕೀತು
ಶಿವನಾ ದಯದಿಂದಾ ಮಾವನವರೇ
ಸುಂಠಿ ಸುಳಿಯಂತೆ ಸುಳುಕುತ್ತಾ...||
ಮುತ್ತಿನ ಸೆರಗಡಿಲಿ ಮುಚ್ಚಿಟ್ಟ ಮಾವನ ಮಗಳು ಸಿಕ್ಕೀತು
ಶಿವನ ದಯದಿಂದ|| ಸಿಕ್ಕೀತೋ ಶಿವನ
ದಯದಿಂದ ಮಾವನವರೆ
ಸಿಕ್ಕೀತೋ ಶಿವನ ದಯದಿಂದ ಮಾವನವರೆ
ಮಗಳು ರಾಜ್ಯಕ್ಕೆ ನಮ್ಮಣ್ಣ ದೊರೆರಾಯ ||
ಹವಳದ ಸೆರಗಡಿಲಿ ಮುಚ್ಚಿಟ್ಟ ಮಗಳು
ಸಿಕ್ಕೀತೊ ಶಿವನ ದಯೆಯಿಂದ ದಯದಿಂದ ||
ಅತ್ತೆಯ ಮಗಳೇ ನಾವು ನೆನದಾ ಕಾರ್ಯ ಜಯವಾದೋ |
ಪಾರ್ವತಿ ಸೀತಾದೇವಿಯರ ವಸ್ತ್ರದಡಿಯಲ್ಲಿ ಮುಚ್ಚಿಟ್ಟ ಕನ್ಯೆಯು
ಸಿಕ್ಕೀತು ಶಿವನಾ ದಯದಿಂದಾ || ನಾವು ನೆನೆದಾ ಕಾರ್ಯ ಜಯವಾದೋ ||

****

# ವಧುವನ್ನು ಶೃಂಗರಿಸುವಾಗ
# (ತಲೆಬಾಚುವುದು)

ಬ್ರಹ್ಮನ ರಾಣಿಯು ನಿಮ್ಮ ಶ್ರೀ ಚೆನ್ನ ಚರಣ ಕೆರಗುವೆನು|
ಹಣ್ಣು ಕಾಯಿ ತರಗು ಚಕ್ಕುಲಿಯ ಚೆನ್ನ ಗಣಪತಿ|
ನೈವೇದ್ಯಕ್ಕೆ ಇಟ್ಟು ನಿಸ್ತಮ್ಮಾಯಿಗೆ| ತುರುಬಿಕ್ಕುವ ಪದವನೆ
ಮಂಡಿಸುವೆ ನಾ | ಮುದದಿಂದಾ ||
ಹನ್ನೆರಡು ಕಂಬಗಳಾ ಮುತ್ತಿನ ಚಪ್ಪರ ಚಿನ್ನದ ಕಂಬವು |
ಮುತ್ತು ರತ್ನದ ನವರತ್ನದ ಬಿದಿಗೆಯಾ ಚಿನ್ನದ ಮಾಣಿಕ್ಯದ
ತಲೆಜಂತೆಗಳ ತಂದಿರುಸಿ| ನಿಸ್ತಲಮ್ಮಾಯಿಗೆ ಕುಳ್ಳಿರುವ
ಜನರಿಗೆ| ಜಗುಲಿಯ ವಿಸ್ತಾರವ ನೋಡಿ ಜನರೆಲ್ಲಾ...||
ಮುತ್ತಿನ ಚಪ್ಪರಾ | ಸುತ್ತೇಳು ದೀವಿಗೆ ಬೆಳಗಿರಲು|
ಓರಣದಿಂದಲಿ ಹಸೆಗಳ ಬರೆದು| ಕರುಣೆ ಕಲಸಿದ
ಹಸೆಮಣೆಗಳ ತಂದಿರಿಸಿ | ಜೋಡು ಪಟ್ಟೆಗಳ ಉಪಚರಿಸಿ ಹಾಸಿ |
ಹಸಿರು ಮುತ್ತೈದೆಯರು ಕುಳ್ಳಿರಲು ಬರಾ ಹೇಳಿ...||
ಹೊರಗೆ ಒಳಗಿರುವವರ ನಾರಿ ಸತಿ ಚೆಲುವೆ|
ಚೆಲುವೆಯರು| ತುರುಬನಿಕ್ಕುವರೇ ಬರಾ ಹೇಳಿ....||

****

ತಲೆಯ ಬಾಚುತ ಜಡೆಯ ಹೆಣೆಯುತ್ತಾ | ಅಂದದ ಹಿಂಗಾರ ಮುಡಿಸುತ್ತಾ ||
ಅಂದದ ಹಿಂಗಾರ ಮುಡಿಸದಿದ್ದರೆ ಕೋಪವೆ ಜಾನಕಿ? ||
ತಲೆಯು ಬಾಚುತ ಜಡೆಯು ಹೆಣೆಯುತಾ-ಕೆಂಡ ಸಂಪಿಗೆ ಮುಡಿಸುತ್ತಾ ||
ಕೆಂಡ ಸಂಪಿಗೆ ಮುಡಿಸದಿದ್ದರೆ ಕೋಪವೆ ಜಾನಕಿ ? ||
ತಲೆಯ ಬಾಚುತ ಜಡೆಯ ಹೆಣೆಯುತಾ ಕೇದಿಗೆ ಹೂವ ಮುಡಿಸುತ್ತಾ ||
ಮುಡಿಸದಿದ್ದರೆ ಕೋಪವೆ ಜಾನಕಿ ?
ತಲೆಯ ಬಾಚುತ ಜಡೆಯ ಹೆಣೆಯುತಾ ಮಲ್ಲಿಗೆ ಹೂವಾ
ಮುಡಿಸುತಾ|| ಮುಡಿಸದಿದ್ದರೆ ಕೋಪವೆ ಜಾನಕಿ?

****

# ಹೂ ಮುಡಿಸುವಾಗ

ಕೊಡು ತಾಯೆ ಕುಸುಮವನು ಶಾರದೆ ತಾಯೆ | ಕೊಡು ತಾಯೆ ಕುಸುಮವನು |
ದವನಾ-ಮರುಗ ಮಲ್ಲಿಗೆ | ಜಾಜಿ ಸುರಗಿ ಸಂಪಿಗೆ ||
ಸರವ ಕೊಡುತಾಯೆ ಕುಸುಮವನೂ ||
ಸಂತತ ಧನವಾದ ದಂತಿನವಾಸಿನಿ| ಸಂತರ ರೂಪಿನೊಳಿರುವಾ
ಸಂಪಿಗೆ ಹೂವಿನ ಸರವಾ | ಕೊಡುತಾಯೆ ಕುಸುಮವನು... ||
ಎಲ್ಲರ ಮನಸ್ಸಿಗೆ ಉಲ್ಲಾಸ ತೋರುವ| ಬಲ್ಲವರು ಮೆಚ್ಚಿದಾ
ಮಲ್ಲಿಗೆ ಹೂವಿನ ಸರವಾ | ಕೊಡುತಾಯೆ ಕುಸುಮವನೂ||

****

ಪಂಕಜಾಕ್ಷನ ಸತಿಗೆ| ಕುಂಕುಮಾಕ್ಷತೆ ತಳೆದು| ವಂಕಿ
ಬಳೆಯನ್ನಿಟ್ಟು, ನಾರಿಯರೆಲ್ಲಾ | ತಂಕಮಾಡದೆ ತಾಉಟ್ಟು
ಪರಿ ಪರಿಯ ತರಿಕೆಯಿಂದಲಿ | ಶಂಕರಾದ್ಯರ ಸತಿಯರ
ಸಹಿತದಲಿ | ಶಂಕರಾದಿ ಜನರು ಮತಿಸುತ ಶಂಕೆಯಿಲ್ಲದೆ|
ಬಗೆ ಬಗೆಯ ಸುಮ ಬಿಂಕದಿಂದಲಿ ಮಂಡಿಸಿದರು ಸೋಬಾನವೇ...||
ಚಾರರಮಣಿಯರ ವಿಚಾರಿಸಿ | ಮನದೊಳು ಸುರವಾಗಿಹುದು
ನೋಡಿ | ದೋಷಗಳೆಲ್ಲಾ ಪಾರುವಾಗುವುದೆಂದಾಡಿ | ಗರ್ಭಿಣಿಯರು
ಸೇರಿ ಶಂಕರನೆಂದೋಡಿ | ಪರಿಚಯ ಮಾಡಿ ಮೂರು ಲೋಕದೊಳು
ಮೆರವಾ ಕುಸುಮದೊಳು | ಭಾರಿ ಖ್ಯಾತಿಯನು ಪಡೆದು
ಸುಲಭದೊಳಾರಿಗೂ ದೊರೆಯಲಸಾಧ್ಯವಾದ| ವಾರಿಜಾಕ್ಷನ
ರಾಣಿಗೆ| ಸುರಪಾರಿಜಾತದ ಹೂವ ಮುಡಿಸಿದರೂ || ಸೋಬಾನ...ವೇ ||
ಗರುಡ ಗಮನ ರಾಣಿ ಪನ್ನಗವೇಣಿ ಕಿರುವಿಲ್ಲಾ ದೊರೆಗಳು
ಇಟ್ಟರು | ಮತ್ತೆ ವರ ಸ್ವರ್ಣಾಭರಣಗಳು ಉಟ್ಟರು | ಪರಿಪರಿಯಾ
ಸೀರೆಗಳಾ ಮಣಿಮಯದ ಸರಗಳಾ | ವಾರೆ ನೋಟದ ವಾರಿಜಾನನೆಯರು |
ಸೇರಿದ ಬಾರಿ ಸಭೆಯೊಳು | ಸಾರ ಸಾಕ್ಷಿಯು ಸೇರಿ
ಬರುತ| ಗಂಭೀರ್ಯಗಾನದೊಳು ಏರಿ ರಭಸದಿ
ಮರುಗ ಮಲ್ಲಿಗೆ ಮುಡುಸಿದರು ಸೋಬಾನವೇ ....||

ಕಡಗವಿಟ್ಟು ಚಿತ್ತಜ ಮಾತೆಗೆ| ಭೃತ್ಯ ನಾರಿಯರು
ಕೂಡಿ ಆನಂದದೊಳುತ್ತಮ ಸಭೆಯ ಮಾಡಿ | ಸಂತೋಷದೊಳೈದು
ಮುತ್ತೈದೆಯರು ಕೈಗೂಡಿ | ಮಂಟಪದಿ ಪಾಡಿ ಅಸ್ತಮ
ಕಾಲ ದೊಳರಳುವ ಚಿತ್ತಕೆ| ಆನಂದ ವೀಯುವ ಪೃಥ್ವಿಯೊಳು
ಬಲು ಉತ್ತಮವೆನ್ನುವ| ಮತ್ತ ಕಾಶಿನಿ ಸತ್ಯ ಭಾಮೆಗೆ
ಕಸ್ತೂರಿ ಮಲ್ಲಿಗೆ ಮುಡಿಸಿದರೂ... ಸೋಬಾನ ವೇ...||

****

ಅಂಗಳದಲಿ ನೆಡುವುದು ಮಲ್ಲಿಗೆ ಗಿಡವ
ಗಿಡ ಬಳ್ಳಿಯಾಗಿ ಬೆಳೆವುದು ಮಲ್ಲಿಗೆ ಹೂವು॥

ಬಿಸುಲಿಗೆ ಬಾಡುವುದಿಲ್ಲ । ಮಲ್ಲಿಗೆ ಹೂವು।
ಇರುಳ ಇಬ್ಬನಿಬಿದ್ದು । ಚೆಲ್ಲಿದ ಮೊಸರಿನಂತಿರಲು॥

ತಿಂಗಳ ಬೆಳಕಿಗೆ । ತಳ ತಳ ಮಿಂಚುವ ಹೂವು।
ಪಟ್ಟೆ ಚೌಕ ಹಾಸಿ । ಕೊಯ್ದು ತಂದ ಹೂವು॥

ಗಾಳಿ ಸೋಕಿದರೆ ಘಮ ಘಮಿಸುವ ಪರಿಮಳ।
ಸೋಬನದ ಸತಿಗೆ ಪ್ರೀತಿಗೊಂದೆಸಳು ಮುಡಿಸಿದರು॥

ತೋಟದಲ್ಲಿ ನೆಡುವುದು ಅಡಿಕೆಯ ಗಿಡವ।
ಬೆಳೆವುದು ಮರವಾಗಿ ಅಡಿಕೆ ಹಿಂಗಾರ॥

ಹಗಲಿನ ಬಿಸುಲಿಗೆ ಬಾಡದ ಹಿಂಗಾರ
ತೊಟ್ಟಿಲಲ್ಲಿ ಮುಚ್ಚಿಟ್ಟಂತೆ ಬಂಗಾರದ ಹೂಬಣ್ಣ॥

ಬಾಡದ ಹಿಂಗಾರ ಹಗಲಿನ ಬಿಸುಲಿಗೆ
ಮದುಮಗಳು ನಾರಿ ಭಾಮೆಯ ಜಡೆಗೆ॥

ಪ್ರೀತಿಗೊಂದೆಸಳು ಮುಡುಸಿದರು
ಸೋಬನದ ಸತಿಗೆ ಮುಡುಸಿದರು

****

ಬಾರಮ್ಮ ರುಕುಮಿಣಿ ನಿನ್ನ ಬಂಧುಗಳೆಡೆಗೆ।
ನಿನ್ನಬಿಟ್ಟು ಇರಲಾರೆ ಒಂದರೆಗಳಿಗೆ॥

ದೊರೆರಾಯ ಅಪ್ಪಯ್ಯ ಮಗಳಿಗೆ ತರುಸಿದ।
ಮಲೆನಾಡ ಮಲ್ಲಿಗೆ ನಿನಗಾಗಿ ಕಾದಿದೆ॥

ರಾಯ ಅಣ್ಣಯ್ಯ ತಂಗಿಗೆ ತರುಸಿದ।
ಬಯಲು ಸೀಮೆಯ। ಮಲ್ಲಿಗೆ ಹಿಂಗಾರ॥

ಪಂಜರದ ಅರಗಿಣಿ ರುಕುಮಿಣಿ ಬಾರಮ್ಮ
ಹಿಂಗಾರ ಮುಡಿಸಲು। ಕರೆವರು ನಿಸ್ತ್ರೆಯರು ॥

****

ನಂದಗೋಕುಲ ಸುತೆಯು ಚಂದೂರಾಯರ ಮಗಳು।
ಬಂದು ಕುಳ್ಳಿರಲು ಹಸೆಮೇಲೆ॥

ಮೂಡಂದ ಬಂದಿತು । ಬೆಡಗಿನ ಬಾಚಣಿಗೆ।
ಮುತ್ತೈದರು ಹೋಗಿ ಬೆಲೆಮಾಡಿ॥

ಸಾಸವೆ ಕಾಳಂತೆ ಸೋಸಿ ಬಾಚಿದ ಬೈತಲೆಗೆ।
ಎಣ್ಣೆ ಗಿಂಡಿಯಾ ತನ್ನಿರೆಂದು॥

ರಾಗದಿ ಸೋಬಾನವ ಹಾಡುತ್ತ ಮುತ್ತೈದೆರು।
ಹೊಳಪುಳ್ಳ ಕೂದಲ ಜಡೆಗೆ ಮುಡುಸಿದರು॥

ಪ್ರೀತಿಗೆ ಮಲ್ಲಿಗೆ ದಂಡೆಯ ಮುಡಿಸುತ್ತಾ
ಸಿಂಗಾರ ಮುಗಿಸಿ, ಸಾಗಿದರು ದಿಬ್ಬಣದೆಡೆಗೆ॥

****

# ಧಾರೆ ಸೀರೆ ಉಡಿಸುವ ಸೋಬಾನೆ

ಪಂಚವರ್ಣದ ಗಿಳಿ ಅಂಚಿನ ಸೀರೆ
ಪತಿ ವಶವಾಗುವ ಈ ಸೀರೆ||
ಆದರ ಚೆಂದವ ನೋಡು ಮೀನಾಕ್ಷಿ |
ಅಂಚಿನ ಮೇಲೊಪ್ಪುವ ಪಂಚವರ್ಣದ ಗಿಳಿ||
ಮಿಂಚಿನ ಬೆಳಕಿಗೆ ಮಿರುಗುವ ಸೀರೆ|
ಜಗನ್ಮೋಹಿನಿ ಸೀರೆ ಜರತಾರಿ ರವಿಕೆ||

ಜಗದಲಿ ಸಿಗದಂತ ಮಾದರಿ ಸೀರೆ|
ಸಾಸುವೆ ಬಣ್ಣದ ಸೀರೆ ಅಲಂಕಾರಕೆ||
ಹಸುರಿನ ಮೈಬಣ್ಣ ಕೆಂಪಿನ ಸೀರೆ|
ಮದುರಂಗಿ ಬಣ್ಣದ ಸೀರೆ ಮಖ ಮಲ್ಲಿನ ರವಿಕೆ||
ಜಗದೊಳಗೆ ಸಿಗದು ಈ ಮಾದರಿ ಸೀರೆ|
ಜಗದಲಿ ಸಿಗದ ಸೀರೆ ಮೀನಾಕ್ಷಿಯ ಸೀರೆ||

ಜಲಜಾಕ್ಷಿ ಸೀರೆ ಮಿರ ಮಿರ ಹೊಳೆವುದು|
ಎಳೆಗೆ ಸಾವಿರ ಹೊನ್ನು ಎಲ್ಲರು ಬಲ್ಲರು||
ಜಲಜಾಕ್ಷಿಗೆ ಗಿಳಿ ವರ್ಣದ ಸೀರೆ|
ಅಂಚು ಮೇಲೊಪ್ಪುವ ಮಿಂಚಿನ ಬಣ್ಣ ||
ಮಿರ ಮಿರ ಮಿರುಗುವ ಪಂಚವರ್ಣದ ಸೀರೆ|
ಜಗದಲಿ ಸಿಗದ ಸೀರೆ| ಹೆಚ್ಚು ಬಾಳುವ ಈ ಸೀರೆ||

* * * *

# ಸೀರೆ ಉಡಿಸುವಾಗ ಹಾಡು

ಚಿತ್ತದಿ ಗಣಪನ ಪುತ್ಥಳಿ ರಮಣನ ಸೀರೆ| ಉತ್ತಮ
ಕರಣಿಕರ ಮಡದಿ ಮಹಾಲಕ್ಷ್ಮೀ ಉಡು ಬಾರೆ||
ಗೋಡೆ ಜೇಡನು ನೈದ ಹೂವಿನೋರಣದ ಸೀರೆ| ನಿಚ್ಚಳು
ನಡುಕಂಬಿ ನಟು ಬೆಳೆದೋರಣದಾ ಸೀರೆ|
ರಾಣೀ ನೀನೀಗ ಉಡುಬಾರೆ||
ಅಂಚಿಗೆ ಅರಗಿನ ಬಣ್ಣ | ಸೆರಗಿಗೆ ಸೀತೆಯು ಬಣ್ಣಾ |
ಅಂಚಿಗಂಚಿಗೆ ಗಿಳಿನೂರು ಬಣ್ಣದ ಸೀರೆ|
ರಾಣೀ ನೀನೀಗಾ ಉಡುಬಾರೆ||
ಸೆರಗಿಗೆ ಸೀತೆಯು ಬಣ್ಣ | ಅಂಚಿಗೆ ಅರಗಿನ ಬಣ್ಣಾ |
ನಡುವಿನ ಬಣ್ಣ ಗುರಗಂಜಿ ಬಣ್ಣದ ಸೀರೆ|
ರಾಣೀ ನೀನೀಗಾ ಉಡುಬಾರೆ||
ಬೊಚ್ಚಳಿಗೆ ಅಡಗುವುದು ಉಟ್ಟ ಬಣ್ಣದ ಸೀರೆ|
ನಾರಿಯವರು ಹೋಗಿ ಬೆಲೆಮಾಡಿ ತಂದ ಸೀರೆ|
ನಾರೀ ಜಾನಕಿ ಉಡು-ಬಾರೆ|
ಕತ್ತಲಿಗೆ ಅಂಜುವುದು ಕಾಗುಣಿಸಿ ನೆಗೆಯುವುದು
ಮುತ್ತಿನ ಭರಣಿಯಲಿ ಅಡಗುವ ಸೀರೆ|
ರಾಣೀ ನೀನೀಗಾ ಉಡುಬಾರೆ||
ಪಟ್ಟೆ ಸೀರೆಯ ಮೇಲೆ ತೇಲಾಡುವ ಗೊಂಬೆಗಳು |
ನಲವತ್ತೊಂದು ವರಹಕ್ಕೆ ಬೆಲೆಯಾದ ಸೀರೆಯಾ|
ರಾಣಿ ನೀನೀಗಾ ಉಡು ಬಾರೆ||
ಮುಂದಲೆ ತಂದೇವು ಮುತ್ತು ಸಾರುವ|
ಮುತ್ತುರಂಗ ಪತಿಯೆಂಬ ರವಿಕೆಯಾ|
ರಂಭೆ ನೀನೀಗಾ ಉಡುಬಾರೆ||
ಆಗಸನಿಗೆ ಹಾಕುವುದಲ್ಲಾ | ಬಿಸಿಲಿಗೆ ತೋರುವುದಲ್ಲಾ |
ತಾಳಿಯ ಮೇಲೆ ನೈದ ಪಟ್ಟೆಗಳಾ| ನಾರಿ ಜಾನಕಿ ಉಡು ಬಾರೆ||
ಅಳೆದರೆ ಅರವತ್ತು ಮೊಳ| ಹಿಡಿದರೆ ಹಿಡಿತುಂಬಾ
ಬಿಟ್ಟರೆ ಬೀದ್ಯೆಲ್ಲಾ ತೆರಪಿಲ್ಲಾದ ಸೀರೆ|
ತರುಣಿ ತಂಗ್ಯಮ್ಮಳಿಗೆ ಉಡು ಸ್ಯಾರು||

****

# ವಧುವಿಗೆ ಆಭರಣ ತೊಡಿಸುವಾಗ

ವಜ್ರದಂಟಿಗೆಗೆಜ್ಜೆ ಸರ ಥಳಾ ಥಳಾ ||
ಅದನ್ನಿಟ್ಟರೆ ಹೊಳೆವುದು ಪಳಾ ಪಳಾ ||
ಸಾಲಮಾಡಿ ತರಬೇಡಿ ನಮಗಾಗಿ | ಹೆಚ್ಚಿಗೇನು ಬೇಡುವುದಿಲ್ಲಾ ನಿಮಗಾಗಿ||

ಮೂಗಿನ್ಮೇಲೆ || ಮೂಗಿನ್ಮೇಲೆ ಮೂಗಲ್ಲಿರುವ
ಮುತ್ತಿನಾ-ಬೊಟ್ಟು ಥಳಾ ಥಳಾ | ಅದನ್ನಿಟ್ಟರೆ ಹೋಳೆವುದು ಫಳಾ ಫಳಾ||

ಕಿವಿಯ ಮೇಲೆ || ಕಿವಿಯಾ ಮೇಲೆ ಕಿವಿಯಾ ಓಲೆ
ಹೊಳೆಯುವುದು ಥಳಾಥಳಾ ಅದನ್ನಿಟ್ಟರೆ ಹೊಳೆಯುವುದು ಫಳಾಫಳಾ |
ಸಾಲಮಾಡಿ ತರಬೇಡಿ ನಮಗಾಗಿ ಹೆಚ್ಚಿಗೇನೂ ಬೇಡುವುದಿಲ್ಲಾ... ನಿಮಗಾಗಿ ||

ಕೊರಳ ಮೇಲೆ || ಕೊರಳಾ ಪದಕಾ ಥಳಾಥಳಾ
ಅದನ್ನಿಟ್ಟರೆ ಹೊಳೆಯುವುದು ಫಳಾಫಳಾ ||
ನಡುವಿನ ಪಟ್ಟಿ || ನಡು ಪಟ್ಟಿ | ಗೆಜ್ಜೆ ಡಾಬೂ ಥಳಾ ಥಳಾ |
ಅದನ್ನಿಟ್ಟರೆ ಹೊಳೆಯುವುದು ಫಳಾ ಫಳಾ ||

ಕಾಲಮೇಲೆ ಕಾಲ || ಬೆರಳಾ ಮೇಲೆ - ಬೆರಳಿನುಂಗುರ
ಹೊಳೆಯುವುದು ಥಳಾಥಳಾ | ಅದನ್ನಿಟ್ಟರೆ ಹೊಳೆಯುವುದು ಫಳಾಫಳಾ

ಸಾಲಮಾಡಿ ತರಬೇಡಿ ನಮಗಾಗಿ |
ಹೆಚ್ಚಿಗೇನೂ ಬೇಡುವುದಿಲ್ಲ ನಿಮಗಾಗಿ ||

ಮೈಯಾ ಮೇಲೆ || ಮೈಯ್ಯಾ ಮೇಲೆ ಮೈಯಲ್ಲಿರುವ
ಜರಿ ಸೀರೆ ಫಳಾ ಫಳಾ| ಅದನ್ನಿಟ್ಟರೆ ಹೊಳೆಯುವುದು ಥಳಾಥಳಾ ||

****

# ವಧುವಿಗೆ ಮಡಿಲಕ್ಕಿ ತುಂಬಿಸುವ ಹಾಡುಗಳು

ಶ್ರೀ ಕೃಷ್ಣ ರುಕ್ಮಿಣಿ-ಸೀತಾದೇವಿಗೆ|| ಸೀತಾದೇವಿಗೆ ಮಡಿಲ ತುಂಬಿರಿ ||
ಮಾವಯ್ಯ ಕಳುಹಿದ ಮಡಿಲಕ್ಕಿ ಮುತ್ತಿನ ಬೊಟ್ಟು |
ಭಾಗ್ಯದ ಸೊಸೆ ಮುದ್ದು ಸೆರಗೊಡ್ಡು | ಸೋಬಾನವೇ ||
ಅತ್ತೆಮ್ಮ ಕಳುಹಿದ ಮಡಿಲಕ್ಕಿ ಮುತ್ತಿನ ಬೊಟ್ಟು |

ಭಾಗ್ಯದ ಸೊಸೆಮುದ್ದು ಸೆರಗೊಡ್ಡು ಸೋಬಾನವೇ ||
ಮಡಿಲಲ್ಲಿ ಅಚ್ಚು ಬೆಲ್ಲ ತಟ್ಟೆಲಿ ತೆಂಗಿನಕಾಯಿ | ಸೋಬಾನವೇ||
ಮಡಿಲಲ್ಲಿ ಎಲೆ ಅಡಿಕೆ ತಟ್ಟೆಲಿ ಬಾಳೆಹಣ್ಣು | ಸೋಬಾನವೇ ||
ಮಡಿಲಲ್ಲಿ ಕರಿಮಣಿ ಬಿಚ್ಚೋಲೆ ತಟ್ಟೆಲಿ ಸಣ್ಣಕ್ಕಿ | ಸೋಬಾನವೇ ||

****

ನಾವು ತಂದಿದೇವೆ ಮಡಿಲಕ್ಕಿ ಸೋಬಾನವೆ|| ನಿನ್ನ ಅತ್ತೆಮ್ಮ
ಕಳುಹಿದಾರೆ| ಒಂದು ಸೇರು ಸಣ್ಣಕ್ಕಿ ನಾವು ತಂದಿದೇವೆ||

ನಾವು ತಂದಿದೇವೆ ಮಡಿಲಕ್ಕಿ ಮುತ್ತಿನ ಬಟ್ಟು |
ಭಾಗ್ಯದ ಸೊಸೆ ಮುದ್ದು ಮಡಲೊಡ್ಡು ಸೋಬಾನವೇ ||

ನಿನ್ನ-ಮಾವಯ್ಯ ಕಳುಹಿದ| ತೆಂಗಿನಕಾಯಿ ಅಚ್ಚು ಬೆಲ್ಲ |
ಭಾಗ್ಯದ ಸೊಸೆ ಮುದ್ದು ಮಡಲೊಡ್ಡು ಸೋಬಾನವೇ ||
ನಿನ್ನ ಭಾವಯ್ಯ ಕಳುಹಿದ| ಒಂದು ಚಿಪ್ಪು ಬಾಳೆಹಣ್ಣು ||
ನಾವು ತಂದಿದೇವೆ ಮಡಿಲಕ್ಕಿ ಸೋಬಾನವೇ ||

ನಿನ್ನ ಅಕ್ಕಯ್ಯ ಕಳುಹಿದ| ಕಳಿ ಅಡಿಕೆ ಚಿಗುರೆಲೆ| ಸೋಬಾನವೇ ||
ನಿನ್ನ ಅತ್ತಿಗೆಮ್ಮಾ ಕಳುಹಿದ|ಅರಶಿನ ಕುಂಕುಮ| ಸೋಬಾನವೇ ||
ನಾವು ತಂದಿದೇವೆ ಮಡಿಲಕ್ಕಿ ಸೋಬಾನವೇ|| ಸೋಬಾನವೇ||

ನಿನ್ನಾ ಪತಿರಾಯಾ ಕಳುಹಿದ | ಕರಿಮಣಿ ಬಿಚ್ಚೋಲೆ ನಾವು
ತಂದಿದೇವೆ| ಭಾಗ್ಯದ ಸತಿಯೇ ಮಡಿಲೊಡ್ಡು | ಸೋಬಾನವೇ|

# ಮಡಿಲಕ್ಕಿ

ಬೆನ್ನದ ಮೊರಕೆ ಮುತ್ತೈದ್ರು ಮುತ್ತು ತುಂಬಿ।
ಮುತ್ತಿನ ಕಂಕಣವ ನಡುಲಿರಿಸಿ ಕುಲಸ್ವಾಮೀ
ಮುತ್ತೈದ್ರು ಕಂಕಣವ ಧರುಸ್ಯಾರು ಸೋಬಾನವೆ॥
ಬೆತ್ತದ ಮೊರಕೆ ಅಕ್ಕಿ ತುಂಬಿ ನಾರಿಯರು
ಕರಿಮಣಿ ಬಿಚ್ಚೋಲೆ ನಡುಲಿರಿಸಿ ಕುಲಸ್ವಾಮಿ॥
ಮುತ್ತೈದೆರು ಕಂಕಣವ ಧರಿಸ್ಯಾರು ಸೋಬಾನವೆ॥
ಮಡಿಲಕ್ಕಿ ಸೆರಗಲ್ಲಿ ಸಣ್ಣಕ್ಕಿ ಮಡಿಲಲ್ಲಿ।
ಶಿಂಗಾರದ ಹೂ ತಂದು ಮುಡುಸಿದರು। ಸೋಬಾನವೇ॥
ಮುತ್ತೈದ್ರು ಕಂಕಣವ ಧರುಸ್ಯಾರು। ಸೋಬಾನವೇ ॥
ಮಡಿಲಕ್ಕಿ ಸೆರಗಲ್ಲಿ ಮಡುಗ್ಯಾರು॥ ಸೋಬಾನವೇ ॥
ಕುಲಸ್ವಾಮೀ ಮಡಿಲಕ್ಕಿ ಸೆರಗಲ್ಲಿ ಮಡು...ಗ್ಯಾರು। ಸೋಬಾನವೆ॥

****

ಸಿದ್ಧಿ ವಿನಾಯಕ ಚಿನ್ಮಯ ರೂಪ। ರುದ್ರಕುಮಾರ ಶ್ರೀ ಜಗದ್ಪೋರಾಜಿತ
ಜನರಿಗೆ ಮುದವೀವ ವಿದ್ಯಾಗಜಮುಖನೆ॥
ಬಲಗೊಂಬೆ ಹೇಮವದು ಜಗುಲಿಯ ಮೇಲೆ
ರುಕ್ಮಿಣಿ ವಿನಯ ಮುತ್ತು ಫಲ ಬಲದೊಳಪ್ಪಿರಲು॥
ಕಡಿದ ಮುತ್ತಿನ ಹರಿವಾಣದಿ ತೆಂಗಿನಕಾಯ ಫಲ ತಂದು ಯಿರುಸ್ಯಾರು॥
ಜಗುಲಿಯ ಮೇಲೆ ರುಕ್ಮಿಣಿ ದೇವಿ ಪ್ರಾಣ ವಲ್ಲಭನ ಬಲದೊಳಪ್ಪಿರಲು
ಕಡಿದ ಮುತ್ತಿನ ಹರಿವಾಣದಿ ತೆಂಗಿನಕಾಯಿ ಫಲ ತಂದುಯಿರುಸ್ಯಾರು॥
ಸುರನಾರಿಯರು ಎಲ್ಲರೊಂದಾಗಿ ದೊರೆರಾಯನಿಗೆ
ಎದುರಾಗಿ ನಿಂದು। ಮಡದಿ ಮಹಾಲಕ್ಷ್ಮಿಗೆ
ಉಡಿಯ ತುಂಬಿರೆಂದು ನುಡಿದಾರು॥
ಶ್ರೀ ಹರಿಯಾಡಿದ ಮಾತನೆ ಮೆಚ್ಚಿ ಕಾಂತೆ
ರುಕ್ಮಿಣಿ ದೇವಿ ಕಡು ಹರುಷದಿ ನಗುತ
ಪೀತಾಂಬರದ ಮಡಿಲ ಹಿಡಿದಾಳು॥
ಕೊಂಬೆಯಿಂದ ಕೊಯ್ದಾಳೆ ಫಲ। ಇಂಬಾಗಿ ಬೆಳೆದ
ಜಂಬೂ ನೇರಳೆ। ಹೂ ಹಣ್ಣು ಫಲ ಎಂದು ತುಂಬಿದಾನೆ ಉಡಿಲಾಗ
ಜಂಬೂ ನೇರಳೆ ಹಣ್ಣು। ಒಂಬತ್ತು ಬಾಲರ ಪಡೆಯೆಂದು
ತಾನೆ ತುಂಬಿದಾನು ಉಡಿಲಾಗ॥

# ಅಕ್ಕಿ ಬಿಸಾಡುವುದು

ಬಾಳೆ ಹನಿ ಬಿದ್ದು ಬಾಲೆಯವರು ಸತಿಗೆದ್ದು||
ಬಾಲೆಯವರು ನಾವು ಗೆದ್ದಾ-ಗಳಿಗೇಲಿ
ಬಾಲೆಯವರು ನಾವು ಗೆದ್ದಾ.... ಗಳಿಗೇಲಿ ಮಾವನವರೇ...
ನಾವು ಹೋಗಿ ಬರುತ್ತೇವೆ...ಮನೆ ದೂರಾ....||

ನಿಂಬೆ ಹನಿ ಬಿದ್ದು -ರಂಭೆಯವರ ಬಳಿಗೆದ್ದು|
ರಂಭೆಯವರು ನಾವು ಗೆದ್ದಾ -ಗಳಿಗೇಲಿ ಅತ್ತೆಮ್ಮ ನವರೇ...
ನಾವು ಹೋಗಿ ಬರುತೇವೆ...ಮನೆ ...ದೂರಾ...||

ಸೇರಲ್ಲಿ ರುವ ಮುತ್ತು ಸೇರಲಿಕೆ ಅತಿ ಕಷ್ಟ |
ಸೇರಿತೋ ಶಿವನಾ | ದಯದಿಂದಾ...|| ಮಾವನವರೇ...
ನಾವು ಹೋಗಿ ಬರುತೇವೆ ಮನೆದೂರಾ...||

ಮಾನದಲ್ಲಿ ರುವ ಮುತ್ತು ಸಿಕ್ಕಲಿಕೆ ಅತಿ ಕಷ್ಟಾ... ಸಿಕ್ಕೀತೋ
ಶಿವನಾ ...ದಯದಿಂದಾ...ಮಾವನವರೇ...|
ನಾವು ಹೋಗಿ ಬರುತೇವೆ ಮನೆದೂರಾ...||
ಪಟ್ಟೆ ಪಚ್ಚಡದೊಳಗೆ ಮುಚ್ಚಿಟ್ಟ ಮಗಳು...ಸಿಕ್ಕೀತೋ
ಶಿವನಾ... ದಯದಿಂದಾ... ಅತ್ತೆಮ್ಮ ನವರೇ...|
ನಾವು ಹೋಗಿ ಬರುತ್ತೇವೆ ಮನೆದೂರ....||

ಶ್ಯಾಲೆ ಪಚ್ಚಡದೊಳಗೆ ಮುಚ್ಚಿಟ್ಟ ಮಗಳು ಸಿಕ್ಕೀತೋ
ಶಿವನಾ... ದಯೆದಿಂದಾ ಮಾವನವರೆ...
ನಾವು ಹೋಗಿ ಬರೋತನಕಾ ಬಲು ಜೋಕೆ...||

ಸಣ್ಣಕ್ಕಿ ಬಯಲಲ್ಲಿ ನಿಂತುಂಟು ನಮ್ಮ ದಿಬ್ಬಣಾ...
ನಾವು ಹೋಗಿ ಬರೋತನಕ ಬಲು ...ಜೋಕೆ|

****

# ವರನ ಕಾಲು ತೊಳೆಯುವ ಹಾಡು

ಮಾವನ-ಮಗನು ಮೋಹದ ಅರಗಿಣಿ ಓಡಾಡಿ ಬರುವನು|
ಸಣ್ಣ ಸಣ್ಣ ಪದಕದ ಸರಪಣಿ| ವರುಷವಾಯಿತು ಹನ್ನೆರಡೂ|
ಹನ್ನೆರಡು ವರುಷಗಳು-ಸಣ್ಣ ಸಣ್ಣ ಬಾಲರಿಗೆ| ನೋಡಿ ಹೆಣ್ಣಾ
ಕೊಡಬಹುದು-ಎಂದು ಮಾವ ನಿಮ್ಮ -ಮಗನಾ-ಶ್ರೀಪಾದ ತೊಳೆದೇವು...||
ಅತ್ತೆಯ ಮಗನು ಮುತ್ತಿನ ಅರಗಿಣಿಯು ಓಡಾಡಿ-ಬರುವನು-
ಸಣ್ಣ ಸಣ್ಣ ಪದಕದ ಸರಪಣಿ ವರುಷವಾಯಿತು-ಹನ್ನೆರಡು|
ಸಣ್ಣ ಬಾಲರಿಗೆ ನೋಡಿ ಹೆಣ್ಣಾ ಕೊಡಬಹುದು-ಎಂದು
ಅತ್ತೆ ನಿಮ್ಮ - ಮಗನಾ ಶ್ರೀ ಪಾದ-ತೊಳೆದೇವು...||
ಬಾವನ ತಮ್ಮ -ಚಿತ್ತದ ಅರಗಿಣಿಯು ಓಡಾಡಿ ಬರುವನು
ಸಣ್ಣ-ಸಣ್ಣಾ ಪದಕದ ಸರಪಣಿ ವರುಷವಾಯಿತು ಹನ್ನೆರಡು
ಹನ್ನೆರಡು ವರುಷ ಬಾಲಗೆ ಆಯ್ತೆಂದು -ಸಣ್ಣ ಬಾಲರಿಗೆ-
ನೋಡಿ ಹೆಣ್ಣಾ ಕೊಡಬಹುದು ಎಂದು -ಭಾವ ನಿಮ್ಮ
ತಮ್ಮ-ನ ಶ್ರೀ ಪಾದ-ತೊಳೆದೇವು...||

****

# ಕಾಲು ತೊಳೆಯುವಾಗ

ಪುಟ್ಟು ಮುತ್ತು ನಿಮ್ಮತ್ತೆ । ಮುತ್ತಿನ ಚಾವಡಿಯಲ್ಲಿ
ಉಯ್ಯಾಲೆ ತೂಗುವಾಗ । ಕಾಲ ತೊಳೆಯ ಬಾರೆ ॥
ಕಾಲನ್ನೆ ತೊಳೆದಾಳು । ಶಾಲಲ್ಲಿ ಒರೆಸ್ಯಾಳು
ಗಂಧ ವಿಭೂತಿ ಹಚ್ಯಾಳು । ಕಾಲ ತೊಳೆಯ ಬಾರೆ ॥
ರಾಯವರ ಪಾದ ಪೂಜು ಬಾರೆ ॥
ಪುಟ್ಟು ಮುತ್ತು ನಿಮ್ಮಾಂವ । ಮುತ್ತಿನ ಚಾವಡಿಯಲ್ಲಿ
ಉಯ್ಯಾಲೆ ತೂಗುವಾಗ । ಕಾಲ ತೊಳೆಯ ಬಾರೆ ॥
ರಾಯವರ ಪಾದ ಪೂಜು ಬಾರೆ ॥
ಕಾಲನ್ನೆ ತೊಳೆದಾಳು । ಶಾಲಲ್ಲಿ ಒರೆಸ್ಯಾಳು
ಗಂಧ ವಿಭೂತಿ ಹಚ್ಯಾಳು । ಕಾಲ ತೊಳೆಯ ಬಾರೆ
ರಾಯವರ ಪಾದ ಪೂಜು ಬಾರೆ ॥

****

# ಧಾರೆ ಆಗುವಾಗ ಹೇಳುವ ಹಾಡುಗಳು

ತಾಯಿ-ಶ್ರೀ ಕಮಲಾ | ತಂದೆ...ವಿಶ್ವೇಶಾ ಕಲ್ಯಾಣವೇ |
ಸೀತೇ... ಕಲ್ಯಾಣವೇ ಕಲ್ಯಾಣವೇ||

ತಾಯಿ-ಶ್ರೀ ಕಮಲಾ ಎಂಬುವುದ ಕೇಳೀಗಾ-ಕನ್ಯೆಗೆ ಧಾರೆ ಒದಗೀತು||
ಕನ್ಯೆಗೆ ಧಾರೆ ಒದಗಿ-ತೆಂಬುದ ಕೇಳಿ-ಸ್ವಾಮಿಯವರಿಗೆ
ಓಲೆಯ ಕಳುಹಿದರು ಕಲ್ಯಾಣವೇ ಕಲ್ಯಾಣವೇ...||

ಓಲೆಯ -ಓದಿಸಿ ನೋಡಿದರು ಸ್ವಾಮಿಯವರು- |
ಗೌಡವರೇ, ಗೌಡವರೆ ಇತ್ತ ಕೇಳಿ| ಕನ್ಯೆಯವರ ಮನೆಗೆ
ಹೋಗುತ್ತೇವೆ || ಕಲ್ಯಾಣವೇ ಕಲ್ಯಾಣವೇ...||

ಕನ್ಯೆಯವರ ಮನೆಗೆ ಹೋಗುತೇವೆ ಗೌಡವರ|
ಬಚ್ಚಲ-ಒಲೆಗೆ ಬೆಂಕಿಯ ಹಾಕಿ | ಕಲ್ಯಾಣವೇ ಕಲ್ಯಾಣವೇ...||

ಕಾಮನ ಗುಡ್ಡಕೆ ಬೆಂಕ್ಯಾದರೂ ಹಾಕ್ಯೆವು|
ಭೀಮನ ಗುಡ್ಡಕೆ ನೀರನ್ನೇ ಬೆರೆಸೀ | ಕಲ್ಯಾಣವೇ ಕಲ್ಯಾಣವೇ...||

ಭೀಮನ ಗುಡ್ಡಕ್ಕೆ ನೀರಾದರೆ ಬೆರೆಸ್ಯಾರು |
ನೀರು ಭೋಜನಕೆ ಹೊರಡೆಂದೂ | ಕಲ್ಯಾಣವೇ ಕಲ್ಯಾಣವೇ...||

ನೀರಾ ಭೋಜನವ ಮಾಡಿದರು ಸ್ವಾಮಿಯವರು|
ಸೀಗೆಯ ಬಾಗೆಯ ತಕ್ಕೊಂಡು |
ಒಳ್ಳೊಳ್ಳೆ ಪಂಚೆಯ ಉಟ್ಟ್ಯಾರು | ಕಲ್ಯಾಣವೇ ಕಲ್ಯಾಣವೇ...||

ಜರಿಯ ಮುಂಡಾಸವ ತಲೆಯ ಮೇಲಿಟ್ಟುಕೊಂಡು
ನೂಲಿನ ಜನಿವಾರ ಹೆಗಲಾ ಮೇಲಿಟ್ಟ್ಯೊ |
ನೀಟಾದ ನಾಮವ ಧರುಸ್ಯಾರು | ಕಲ್ಯಾಣವೇ ಕಲ್ಯಾಣವೇ...||

ನೀಟಾದ ನಾಮವ ಧರುಸ್ಯಾರು ಸ್ವಾಮಿಯವರು|
ಬೆಳ್ಳೀಯ ಗಿಂಡಿ ಹಿಡಿದಾರು | ಪಾತಾಳದ ಪನ್ನೀರು ತಂದಾರು ||
ಪಾತಾಳದ ಪನ್ನೀರು ಹಿಡಿದಾರು ಸ್ವಾಮಿಯವರು |
ನಾಗಾ ಬೆತ್ತವ ಕೈಯಲ್ಲಿ ತಕ್ಕೊಂಡು | ಹೂವಿನ
ತೋಟಕ್ಕೆ ನಡೆದಾರು | ಕಲ್ಯಾಣವೇ ಕಲ್ಯಾಣವೇ...||

ತನ್ನ ರಮನೆಗೆ ನಡೆದಾರು ಸ್ವಾಮಿಯವರು |
ತಾಯವ್ವ ತಾಯವ್ವಾ ಇತ್ತ ಕೇಳಿ | ಕನ್ಯೆಗೆ ಧಾರೆ ಒದಗಿತು ||
ಕನ್ಯೆಗೆ ಧಾರೆ ಒದಗಿತೆಂಬುದ ಕೇಳಿ-ಕನ್ಯೆಯರ
ಮನೆಗೆ ಹೋಗುತೇವೆ ನಂದಾ-ದೀವಿಗೆಗೆ
ಐದು ಶರಣವ ಮಾಡಿ ತಾಯಿ ಪಾದಕೆ ಶರಣೆಂದಾರು ||ಕ|
ತಾಯಿ ಪಾದಕೆ ಶರಣವ ಮಾಡಿ | ಮುತ್ತಿನ
ಮೆಟ್ಟು ಕಲ್ಲು ಇಳಿದಾರು ಸ್ವಾಮಿಯವರು |
ಕನ್ಯೆಗೆ ಧಾರೆ ಒದಗೀತೆಂಬುದು ಕೇಳಿ ಕನ್ಯೆಯವರ ಮನೆಗೆ ಹೋಗುತ್ತೇವೆ -|ಕ|
ನುಗ್ಗೆ ಮರದಡಿಗಾಗಿ ನುಗ್ಗಿ ಬರುವ ಹಾರುವಯ್ಯಾ -|
ಕನ್ಯೆಗೆ ಧಾರೆ ಒದಗೀತು | ಬಾಳೆ ಮರದಡಿಗಾಗಿ ಬಗ್ಗಿ
ಬರುವ ಹಾರುವಯ್ಯಾ | ಕನ್ಯೆಯವರ ಮನೆಗೆ ಹೋಗುತೇವೆ |ಕ|
ಕಂದನಾ ಕೈಕೆಳಗೆ ಕನ್ಯೆಯ ಕೈ ಮೇಲೆ |
ಕನ್ಯೆಗೆ ಧಾರೆ ಎರೆದಾರು || ಕಲ್ಯಾಣವೇ ಸೀತೆಗೆ ಕಲ್ಯಾಣವೇ ||
ಕನ್ಯೆಯ ಕೈ ಕೆಳಗೆ ಕಂದಾನ ಕೈಮೇಲೆ
ಕಂದಾಗೆ ಧಾರೆ ಎರೆದಾರು || ಕಲ್ಯಾಣವೇ ಸೀತೆಗೆ ಕಲ್ಯಾಣವೇ ||
ಕಂದಾನ ಕೈ ಕೆಳಗೆ ಕನ್ಯೆಯಾ ಕೈಯಾ ಮೇಲೆ
ಕನ್ಯೆಗೆ ಧಾರೆ ಎರೆದಾರು || ಕಲ್ಯಾಣವೇ ಸೀತೆಗೆ... ಕಲ್ಯಾಣವೆ ||

****

# ಹಾರ ಹಾಕುವಾಗ

ಚಿಕ್ಕ ಬಾಲಕಿಯೊಳು ಠಕ್ಕು ಮಾಡಲದೇಕೆ? ಪಲ್ಲ ಪಾದರ
ನಿನ್ನಾ-ಚೆಲ್ಲಾಟ ಸಾಕಿನ್ನು ಮಲ್ಲಿಗೆಯ ಹಾರುವನು ಸಲ್ಲಿಪೆನು ಕಾಂತಾ ||
ತರುಣಿಯಾದೆನ್ನ ನೀ ಪರಿಕಿಸುವುದಿನ್ನೇನು? |
ಸರಸದಿಂ ಸಂಪಿಗೆಯಾ ಹಾರ-ಹಾಕುವೆನೂ- |
ಸಂಪೂರ್ಣ ನೀವೆಂದರಿತು | ಘನತರದ ಜಾಜಿ ಹಾರವನು
ಪಿಡಿದಿಹೆನು | ಮಾತನಾಡದೆ ಬಿಡಲು ನಾ ಸುಮ್ಮನಿರೆನು-
ಪ್ರೀತಿಯಿಂದಾ -ಹಾರಗಳರ್ಪಿಸುವೆನು | ಖ್ಯಾತ ಮಾಂಗಿರಿ
ರಂಗ ನೀನೆಂದು ತಿಳಿದು | ಹಾರವನು ಸಲ್ಲಿಪೆನು ಕಾಂತಾ- ||

****

ಕಾವೇರಿ ಹೊಳೆ ಹತ್ತಿ ಬರುತ್ತಾನೆ ಮದುವಣ್ಣಾ | ಚಿನ್ನಾದ
ಜನಿವಾರ ಇಟ್ಟುಕೊಂಡು || ನುಗ್ಗೆ ಮರದಡಿಗಾಗಿ ನುಗ್ಗಿ
ಬರುವಾ ಮದುವಣ್ಣಾ ಸೋಬಾನವೋ ||
ಬೆಳ್ಳಿಯ ಗಿಂಡಿ-ಬಲಕೈಲಿ ಹಿಡಕೊಂಡು |
ಕಂದಗೂ ಕನ್ಯೆಗೂ ಧಾರೆ ಎರೆಯುವಾ ಬನ್ನಿ ಸೋಬಾನವೋ ||
ನೂಲಿನ ಜನಿವಾರ ಹೆಗಲಲ್ಲಿಟ್ಟುಕೊಂಡು |
ಕನ್ಯೆಗೂ ಕಂದಾಗೂ ಧಾರೆ ಎರೆಯುವಾ ಬನ್ನಿ | ಸೋಬಾನವೋ ||
ಕಾಗೆ ಮುಟ್ಟದ ನೀರು | ಜೋಗಿ ಸುಳಿಯದ ನೀರು
ಪಾತಾಳದ ಪನ್ನೀರು ತರುತಾನೆ || ಹಾರುವಯ್ಯಾ ಕನ್ಯೆಗೂ
ಕಂದಾಗೂ ಧಾರೆ ಎರೆಯುವಾ ಬನ್ನಿ | ಸೋಬಾನವೋ-ಸೋ-||

## ಧಾರೆ

ಮುತ್ತೀನ ಚಪ್ಪರ ಮೂವತ್ತು ಗಾವುದ್ದ | ಮುತ್ತೀನ
ಹೊಂಬಾಳೆ ಚಿಗುಸೇವು | ಮುತ್ತೀನ ಹೊಂಬಾಳೆ ಚಿಗುಸೇವು
ಮಾವನವರೇ | ಮುತ್ತೈದೆಯರ ದಂಡಿಗೆ ಇಳಿದೇವೋ || ಸೋಬಾನವೇ ||
ಚಿನ್ನಾದ ಚಪ್ಪರ ಹನ್ನೆರಡು ಗಾವುದ್ದಾ-ಚಿನ್ನಾದ
ಹೊಂಬಾಳೆ ಚಿಗುಸೇವು | ಚಿನ್ನಾದ ಹೊಂಬಾಳೆ ಚಿಗುಸೇವು
ಮಾವನವರೇ | ಕನ್ಯೆಯರ ದಂಡಿಗೆ ಇಳಿದೇವೋ || ಸೋಬಾನವೇ ||
ಆನೆಯ ಮೇಲೆ ಶಿವ ಬಂದ ಶಿವ ತಾನೆ? ಪಟ್ಟೇಯ
ಬಿಚ್ಚಿ ಬಿಳಿದುಟ್ಟು | ಪಟ್ಟೇಯ ಬಿಚ್ಚಿ ಬಿಳಿದುಟ್ಟು |
ಹಾರುವಯ್ಯಾ | ಸೋಬಾನವೇ ||
ಮುತ್ತಿನ ಜನಿವಾರ ಹೆಗಲಲ್ಲಿ ಹಾರುವಯ್ಯಾ | ಅಂಬರ
ಬನಕೆ ನಡೆದಾರು | ಅಂಬರ ಬನಕೆ ನಡೆದಾರು ಹಾರುವಯ್ಯಾ |
ಕನ್ಯೆಯ ಕೊರಳಿಗೆ ವನಮಾಲೆ ಕೊಟ್ಟಾರು ||
ಅವರಿಬ್ರು ಹೋಳೆಯಲ್ಲಿ ಹಾರುವಯ್ಯಾ || ಸೋಬಾನವೇ ||
ಬೆಳ್ಳೀಯ ಗಿಂಡಿ ತಂದಾರು-ಹಿಂಗಾರದ ಹೂ
ತಂದಾರು | ಸೋದರ ಮಾವ ಬಂದಾರು | ಚಪ್ಪರದ
ತುಂಬಾ ಗಿಲಿರಂದೂ | ಸೋಬಾನವೇ ||
ಮುತ್ತೀನ ಚಪ್ಪರದೊಳಮಧ್ಯೆ ಬಾಗೇಯಾ |
ಮರದಡಿಲಿ ಬಗ್ಗಿ ಬರುವ ಹಾರುವಯ್ಯಾ |
ಕಂದಾಗೂ-ಕನ್ಯೆಗೂ ಸೋಬಾನವೇ ||

ಹಿಂದಿಂಗಳ ಬೆಳಕಲ್ಲಿ | ಹಿಂದಿಬ್ಬರು ಹಾರುವರು |
ಗಂಧಾದ ಭರಣಿ ಹಿಡಕೊಂಡು | ಗಂಧದಾ ಭರಣಿ
ಹಿಡಕೊಂಡು ಹಾರುವಯ್ಯಾ | ಕಂದಾಗೆ ಕೈ ಧಾರೆ ಎರೆದಾರು ||ಸೋಬಾನವೇ||
ಹಿಂದಿಂಗಳ ಬೆಳಕಲ್ಲಿ | ಹಿಂದಿಬ್ರು ಹಾರುವರು|
ತಾಮ್ರದ ಚೆಂಬಾ ಹಿಡಕೊಂಡು| ತಾಮ್ರದ ಚೆಂಬಾ
ಹಿಡಕೊಂಡು ಹಾರುವಯ್ಯಾ | ಕನ್ಯೆಗೆ ಕೈ ಧಾರೆ ಎರೆದಾರು ||ಸೋಬಾನವೇ||
ಇನ್ನೊಂದು ಗಳಿಗೆ ತಡಿಗಾಳಿ ಸುಳಿಗಾಳಿ |
ಕನ್ಯೆಗೆ ಧಾರೆ ಎರೆಯುತೇವೆ| ಕನ್ಯೆಗೆ ಧಾರೆ ಎರೆಯುತೇವೆ|
ಸೋಬಾನವೇ| ಸೋಬಾನವೇ| ಸೋಬಾನವೇ| ಸೋಬಾನವೇ||

****

## ಸೀತಾವಳಿ ಚಪ್ಪರದೊಳಗೆ ಬರುವ ಮೊದಲು

ಪಟ್ಟಣದ ಜನರು ವಿಸ್ತಾರದ ಬಂಧುಗಳು
ತಮ್ಮ ದಿಬ್ಬಣ ಆನಂದದಿಂದಾ...ಬರುತ್ತೇವೆ-॥
ಸೂರ್ಯ ಮಂಡಲದಂತೆ ಹೊಳೆಯುವ ಬಂಡಿಯನ್ನೇರಿ-ಶೃಂಗಾರವಾದ
ಸತಿಯವರ ಬೆಡಗೊಂದು ಆನಂದದಿಂದಾ ಬರುತ್ತೇವೆ-॥
ಮುತ್ತಿನ ಚಪ್ಪರದಡಿಯಲ್ಲಿ ಉತ್ತಮರ ಕುಳ್ಳಿರಿಸಿ ಉತ್ತಮರಿಗೆ
ಕೈಯಾ ಮುಗಿಯುತ್ತಾ ನಮ್ಮ ದಿಬ್ಬಣ । ಆನಂದದಿಂದ । ಬರುತ್ತೇವೆ-॥
ಎಲ್ಲುಂಟು-ಚಪ್ಪರ ಎಲ್ಲುಂಟು ಚಾವಡಿ?
ಎಲ್ಲುಂಟು ಮಾವ ಸ್ಥಳ ನಮಗೆ? ಇಂಬುಂಟು ನಿಮ್ಮಾ...ಅರಮನೆ-॥
ಕನ್ಯೆ ನಿಮ್ಮಗಳಾ ಮದುವೇಗೆ । ದಿಬ್ಬಣ ನಿಮ್ಮನೆಗೆ
ಆನಂದದಿಂದಾ ಬರುತ್ತೇವೆ ॥.........
ದೊಡ್ಡವಳ-ಕೈಯಲ್ಲೀ ದೊಡ್ಡ ವರಹವನಿರಿಸಿ ।ದೊಡ್ಡ ಶ್ರೀ ತುಳಸಿ
ದಳಲೂಡಿ ಅಪ್ಪಯ್ಯ ಮಗಳಿಗೆ ಧಾರೆ ಎರೆಯುವಾಗ ಅಪ್ಪಯ್ಯನ
ತುಟಿಗಳು-ಅದುರ್‍ಯಾವು । ಮಗಳಾ-ಕಣ್ಣಾ ಜಲಕಂಡು । ನಿಮಿಷದಿ ನಿಮ್ಮಗಳು
ಪರರಿಗೆ ಹೋಗುವಳೆಂದು । ಅಪ್ಪಯ್ಯನ ದುಃಖ ಘನವಾದೋ ॥
ಮಂಟಪ ಕಂಬ ಸಾರಿ ಯಾಕಳುವೆ ಮದು ಮಗಳೇ ಮೂಗುತಿ
ಇಟ್ಟವನು ಬಿಡಲಾರ ಇನ್ನೇನು ತಂಗ್ಯಮ್ಮಾ
ಬಾರೆ ನಮ್ಮೂರಿಗೆ ಪತಿಯಾನೆರಳಡಿಗೆ॥

****

# ಧಾರೆ

ಜನಕರಾಯನ ಮಗಳು ಜಾನಕಿಯ ಮದುವೆಯೆಂದು|
ದಶರಥನಲ್ಲಿ ಗೆ ತೆರಳಿ ಬರಹೇಳಿ||
ಮದುವೆಯ ಸುದ್ದಿ ಯ ಲಿಖಿತವನೆ ಬರೆದು-ಕಳುಹಿದ
ಸುದ್ದಿ ತಿಳಿದು ಪಟ್ಟಣದಾ || ಪುರಜನರು ವಿಸ್ತಾರದ ಬಂಧುಗಳು
ರಾಯವಣ್ಣಯ್ಯನಾ ಮದುವೆಗೆ ||
ಆರು ಜೋಡಿನ ಕೋಳಲು | ಮೂರು ಜೋಡಿನ ವಾದ್ಯಗಳು
ರಾಯವಣ್ಣಯ್ಯನಾ-ಮದು-ವೇಗೆ-||
ಸೂರ್ಯ ಮಂಡಲದ ಕೊಡೆಯು ಹೊಳೆಯುವಂತೆಯುಳ್ಳ
ಬಂಡಿಯ ಮೇಲೇರಿ | ಹೆಬ್ಬಾಗಿಲ ಮುಂದೆ ಗುಬ್ಬಿ ಓಲೆಯಾ ಬರೆದು-|
ಜೋ-ಜೋ-ತಾಹಾರಾಡುತ ಬರುತದೆ ನಮ ದಿಬ್ಬಣ
ಚಂದದಲಿ ನೀನು ಇರು ಗೊಂಬೆ||
ಚಪ್ಪರದ ಮುಂದುಗಡೆ ಗುಬ್ಬಿ ಓಲೆಯಾ-ಬರೆದಿರುಸಿ-
ಜೋ-ಜೋ-ತಾಹಾರಾಡುತ ಬರುತದೆ ನಮ್ಮ ದಿಬ್ಬಣ |
ಚಂದದಲಿ ನೀನು ಇರು ಗೊಂಬೆ||
ಚಿಕ್ಕ ಚಿಕ್ಕ ಕೈಯಲ್ಲಿ ಚಿಕ್ಕ ವರಹವನಿರಿಸಿ | ಚಿಕ್ಕ ಶ್ರೀ ತುಳಸೀ
ದಳಲೂಡಿ ಮಾವಯ್ಯಾ ಸೊಸೆ ಮುದ್ದಿಗೆ ಧಾರೆ-ಎರೆಯಾ-ಬನ್ನಿ||
ಸಣ್ಣಾ ಸಣ್ಣಾ ಕೈಯಲ್ಲಿ ಸಣ್ಣ ವರಹವನಿರಿಸಿ | ಸಣ್ಣ ಶ್ರೀ ತುಳಸಿ
ದಳಲೂಡಿ ಅಪ್ಪಯ್ಯ ಮಗಳಿಗೆ ಧಾರೆ ಎರೆಯಾ ಬನ್ನಿ||
ಸಣ್ಣಾ ಸಣ್ಣಾ ಕೈಯಲ್ಲೀ ಸಣ್ಣ ವರಹನಿರಿಸಿ | ಸಣ್ಣ ಶ್ರೀ ತುಳಸಿ
ದಳಲೂಡಿ ಅಣ್ಣಯ್ಯ ಧಾರೆ ಎರೆಯುವಾಗ | ಅಣ್ಣಯ್ಯನ
ಅತ್ರಾವು ನಮಗೀದೋ ತಂಗ್ಯಮ್ಮನ ಕಣ್ಣ ಜಲಕಂದು-||
ಮೂಗುತಿ ಇಟ್ಕೋನು ಬಿಡೋನಲ್ಲಾ
ಇನ್ನೇನು ತಂಗ್ಯಮ್ಮ ನಿಮ್ಮೂರಿಗ್ಹೋಗಾನಾ ||
ತಾಳಿ ಕಟ್ಟಿದವನು ಬಿಡೋನಲ್ಲಾ ಇನ್ನೇನು ಏಳೀ ಪರದೇಶಕ್ಕೆ-||
ಆರು ಜೋಡಿನ ಕೊಳಲು ಮೂರು ಜೋಡಿನ
ವಾದ್ಯಗಳೊಂದಿಗೆ ಏಳೀ ಪರದೇಶಕೆ....||

****

ಮುತ್ತೀನ ಚಪ್ಪರ ಮೂವತ್ತು ಗಾವುದ್ದ।
ನಿಸ್ತ್ರೀಯವರ ಅತ್ರವು ನಡುಗೀತು॥
ಎಷ್ಟೊಂದು ಸಡಗರ ಮಗಳಿಗೆ ಮಾವನವರೇ
ಕನ್ಯೆಯ ಕರೆತನ್ನಿ ಧಾರೆಮಂಟಪಕೆ॥ಸೋಬಾನವೆ॥
ಕೊಟ್ಟೊರು ಹೋಳೆಯಲ್ಲಿ ಅಲ್ಲಿ ಬ್ರ ಹಾರುವರು ಪಟ್ಟೇಯ ಬಿಚ್ಚಿ
ಬಿಳಿದುಟ್ಟು। ಚಿನ್ನಾದ ಜನಿವಾರ ಹೆಗಲಲ್ಲಿ ಇಟ್ಟುಕೊಂಡು
ಕನ್ಯೆಗೆ ಧಾರೆ ಎರೆಯಾಬನ್ನಿ ॥ಸೋಬಾನವೇ॥
ಕಾಗೆ ಮುಟ್ಟದ ನೀರು ಜೋಗಿ ಸುಳಿಯದ ನೀರು ಪಾತಾಳದ
ಪನ್ನೀರು ಹಿಡಕೊಂಡು...। ಕನ್ಯೆಗೆ ಧಾರೆ ಎರೆಯಬನ್ನಿ ॥ಸೋಬಾನವೇ॥
ಕನ್ಯೆಗೆ ಧಾರೆ ಎರೆಯಾ..ಲು ಯಾರ್ಯಾರು ಬರಬೇಕು?
ಕನ್ಯೆಗೆ ಧಾರೆ ಎರೆಯಾ ಬನ್ನಿ॥
ತಂದೆ ಸೋದರದ ಹಿರಿಮಾವ॥ ತಾಯಿ ಸೋದರದ ಹಿರಿಭಾವ॥ಸೋಬಾನವೇ॥
ಕನ್ಯೆಯ ಕೈಕೆಳಗೆ ಕಂದಾನ ಕೈ ಮೇಲೆ
ಕನ್ಯೆಗೆ ಧಾರೆ ಎರೆಯಾ ಬನ್ನಿ ॥ಸೋಬಾನವೇ॥
ಕಂದನ ಕೈಗೆ ಐದೆಲೆ ಒಂದಡಿಕೆ ಸೋಬಾನವೇ॥
ಮುತ್ತೀನ ಚಪ್ಪರದಡಿಯಲ್ಲಿ ಉಕ್ಕಿ ಬೀಸುವ ಮಳೆಗಾಳಿ
ಇನ್ನೊಂದರ ಗಳಿಗೆ ತಡಿ ಮಳೆ ಕನ್ಯೆಗೆ ಧಾರೆ ಎರೆಯುತೇವೆ॥ಸೋಬಾನವೇ॥
ಹವಳದ ಮಂಟಪದಡಿಯಲ್ಲಿ ಉಕ್ಕಿ ಬೀಸುವ ಗಾಳಿ
ಇನ್ನೊಂದರಗಳಿಗೆ ತಡಿಗಾಳಿ। ಕನ್ಯೆಗೆ ಧಾರೆ ಎರೆಯುತೇವೆ॥ಸೋಬಾನವೇ॥

****



# ಜರಿಯುವ ಹಾಡು

*ಎಂತ ನೆಂಟರಪ್ಪ ಇವರು ಎಂತ ನೆಂಟರು? ॥*

*ನೀರನಂತು ಕೊಡಲಿಲ್ಲಾ – ಚಾಪೆ ಅಂತೂ ಹಾಸಲಿಲ್ಲಾ*
*ಹರಿವಾಣದಲ್ಲಿ ವೀಳ್ಯವಂತೂ ತರಲೆಯಿಲ್ಲಾ ॥*

*ಮದುವೆ ಮನೆಗೆ ಹೋದರೆ ವಾಲಗದ ಸದ್ದಿಲ್ಲಾ*
*ಮೈಕಾಸುರನ ಗಡಸು ದನಿಯದೆ ದರ್ಬಾರು ॥*
*ಅಪ್ಪ ಹಪ್ಪ ಎಂತ ನೆಂಟರಪ್ಪ ಇವರು ಎಂತ ನೆಂಟರು? ॥*

*ಹಣ್ಣಡಿಕೆ ಒಡೆದು ಹನ್ನೆರಡು ಹೋಳು ಮಾಡಿ*
*ಗೋಟಡಿಕೆ ತುಂಬಿತ್ತು ತಟ್ಟೆಯಲ್ಲಿ ॥*

*ಊಟವಂತೂ ಬಾರಿ ರುಚಿಯಾಗಿತ್ತಲ್ಲಾ*
*ಉಪ್ಪು ಮಾತ್ರ ಕಮ್ಮಿ ಇದ್ದಂಗಿತ್ತಲ್ಲೊ? ॥*
*ಅಪ್ಪ ಹಪ್ಪ ಎಂತ ನೆಂಟರಪ್ಪ ಇವರು ಎಂತ ನೆಂಟರು? ॥*

*ಓ ನೆಂಟರೆ ಮತ್ತೆ ಬಂದು ಮಾತಾಡುತ್ತೇವೆ*
*ಈಗ ಹೋಗಿ ಬರುತ್ತೇವೆ ॥ ಅಪ್ಪ ಹಪ್ಪ .....*
*ಅಪ್ಪ ಹಪ್ಪ ಎಂತ ನೆಂಟರಪ್ಪ ಇವರು ಎಂತ ನೆಂಟರು?॥*

****



# ಜರೆಯುವ ಹಾಡು

ಹತ್ತು ವರುಷಗಳಾ ಹಿಂದೆ। ಮುತ್ತೂರ ಕೇರಿಯಲ್ಲಿ
ಅತ್ತಿತ್ತ ಸುಳಿದವರು ನೀವಲ್ಲವೇ? ನೀವಲ್ಲವೆ?॥
ಮಲೆನಾಡ ಹೆಣ್ಣೊಂದು ಮಾರುದ್ದ ಜಡೆಯೊಂದು।
ಹಾಡಿ ಕುಣಿದವರು ನೀವಲ್ಲವೆ? ನೀವಲ್ಲವೆ?॥
ತೊಂಡೆ ಹಣ್ಣಿನ ತುಟಿಯಂತೆ ನಿಂಬೆ ಹಣ್ಣೊಂದು।
ಹಾಡಿ ಕುಣಿದವರು ನೀವಲ್ಲವೆ? ನೀವಲ್ಲವೆ?
ಬೆಟ್ಟಗಳ ಸಾಲಿನಲಿ ಕಾಡುಗಳ ಹಾದಿಯಲಿ।
ಅತ್ತಿತ್ತ ಸುಳಿದವರು ನೀವಲ್ಲವೆ? ನೀವಲ್ಲವೇ?॥
ಚಿನ್ನದಂತಹ ಮರದಿಂದಾ ಬಂಗಾರದಂಥ ಹಿಂಗಾರ
ತಂದು, ಜಡೆಗೆ ಮುಡಿಸಿದವರು ನೀವಲ್ಲವೆ? ನೀವಲ್ಲವೆ?॥
ಪೇಟೆಗಳ ಮಧ್ಯದಲಿ ಹಳ್ಳಿಗಳ ಹಾದಿಯಲಿ।
ತಡೆ ತಡೆದು ಮಾತನಾಡಿಸಿದವರು ನೀವಲ್ಲವೆ? ನೀವಲ್ಲವೆ?
ಹತ್ತು ವರುಷಗಳಾ ಹಿಂದೇ ಮುತ್ತೂರ ಕೇರಿಯಲಿ
ಅತಿತ್ತ ಸುಳಿದವರು ನೀವಲ್ಲವೆ? ನೀವಲ್ಲವೆ?॥

****



# ಸೇಸೆ ಅಕ್ಕಿ ಹಾಕುವಾಗ

ಮೂಡಂದ ಬಂದಾವು | ಮೂರು ಸಾವಿರ ಗಿಳಿಗಳು |
ಅವರ ಪುಕ್ಕನ್ನೆ-ನೋಡಿ ಹುಸಿನಗೆ ಆಡುವ | ರಾಯಗು ರಂಭೆಗು
ಹಸೆ ಒಂದೇ-| ರಾಯಾಗು ರಂಭೆಗೂ ಹಸೆ ಒಂದೆನಾದರೆ
ಪದ್ಮಾ-ದ ಸೇಸೆ ತಳಿಯಾ-ಬನ್ನಿ ||ಸೋಬಾನವೇ||

ಪಡುವಂದ ಬಂದಾವು | ಆರು ಸಾವಿರ ಗಿಳಿಗಳು
ಅವರ ರೆಕ್ಕೆನ್ನೆ ಹೊಯಿಸಿ ಹುಸಿ ನಗೆ ಆಡುವ | ಅಕ್ಕಾಗು ಬಾವಗು
ಹಸೆ ಒಂದೇ ನಾದರೆ ಮುತ್ತಿನ ಸೇಸೆ ತಳಿಯ ಬನ್ನಿ||
ಹಣ್ಣು ತಿನ್ನುವ ಗಿಳಿ | ಹಾಲು ಕುಡಿಯುವ ಗಿಳಿ | ಹಾಲೇರಿ

ನಾಡಿಗೆ ಹೋದ ಗಿಳಿಗಳು ಜಿಲ್ಲೆಯ ಭಾಗಕ್ಕೆ ನಡೆದಾವು-||
ಹಾಲು ಕುಡಿಯುವ ಗಿಳಿ ಹಣ್ಣು ತಿನ್ನುವ ಗಿಳಿ-ಹಾಲೇರಿ
ಸೀಮೆಗೆ ಹೋದ ಗಿಳಿಗಳು ಕೊಪ್ಪಿನ ಭಾಗಕ್ಕೆ ನಡೆದಾವು||
ಬಾಳೆ ಹಣ್ಣಿನ ಮೇಲೆ ದಾಯನಾಡುತ ಬಂದ ದಾಯ ಕಾಣತ್ತೆ

ನಿಮ್ಮಳಿಯಾ | ಮದು ಮಕ್ಕಳಿಬ್ಬರು ಕಿತ್ತಳೆ ಹಣ್ಣಿನ ಮೇಲೆ
ಚಂಡನಾಡುತ ಬಂದಾ ಚಂದ್ರ ಕಾಣತ್ತೆ ನಿಮ್ಮಳಿಯಾ ||
ನಿಂಬೆ ಹಣ್ಣಿನ ಮೇಲೆ ಸರಸವಾಡುತ ಬಂದ
ಚಂದ್ರ ಕಾಣತ್ತೆ... ನಿಮ್ಮಳಿಯಾ ||ಸೋಬಾನವೇ||

ದಾಯ ದಾಯವ ತನ್ನಿ | ದಾಯ ದೋಲೆಯ ತನ್ನಿ|
ಭಾವ ತಂಗೀನ ಕರೆತನ್ನಿ||
ದೊಡ್ಡ ಬಟ್ಟಲಲ್ಲಿ ದೊಡ್ಡಕ್ಕಿ ತಂದಿರಿಸಿ | ರಾಯಾಗು ರಂಭೆಗು
ಕೈಯಿರಿಸಿ | ವಜ್ರದುಂಗುರಾ.. ಗಿಲಿರೆಂದೂ ||

ಮಾವನವರ ಮನೇಲಿ ಮುತ್ತಿನ ದಾರಂದ ಮುಟ್ಟಿ ಹೋದರೆ
ಮಗಳನ್ನು ಕೊಡಲಾರೆ ಮದುವಣ್ಣಾ ||ಸೋಬಾನವೇ||
ಮುಟ್ಟಿಹೋದರೆ ಮಗಳನ್ನು ಕೊಡದಿದ್ದರೆ
ಬೇರೊಬ್ಬರ ಮಗಳನ್ನು ಕೊಡಬೇಕು||
ಬಾವನವರ ಮನೆಲಿ ಚಿನ್ನದ ದಾರಂದ
ಮುಟ್ಟಾದೆ ಹೋಗು ಮದುವಣ್ಣಾ|
ಉಪ್ಪರಿಗೆ ಒಳಗೆ ಹತ್ತಡಿಕೆ ಹೋಳೆಣ್ಣೆ
ಮಾವನ ಕಂಡಲ್ಲಿ ಅತಿರಂಭೆ|

ಮೂಡಣ ಜಗುಲಲ್ಲಿ ಮುತ್ತೈದೆ ನಾಡುವ ಗಿಳಿಗಳು
ಪುರುಷನ ಕಂಡಲ್ಲಿ ಅತಿರಂಭೆ||ಸೋಬಾನವೇ||

# ಹೆಣ್ಣು ಇಳಿಸುವ ಮೊದಲು

ಅಣ್ಣಯ್ಯಾ ನಾವು ಬಂದು ಆರೇಳು ದಿನವಾದೋ
ಹೋಗಾನ ಬನ್ನಿ ಅರಮನೆಗೆ ||
ಮುತ್ತೀನ ಮಳೆ ಮೋಡ ಕವಿದಾರು ಕವಿಯಲಿ |
ಈರೇಳು ಲೋಕದ ಹೊಳೆ ಕಟ್ಟಿರಣ್ಣಯ್ಯ |
ಹೆಜ್ಜೆ ಹೆಜ್ಜೆಗೆ ಹಲಗೆ ಹಾಕಿಸುವೇ ||

ಮಾವನ ಮಗಳು ಬಲುರಂಭೆ | ರಂಭೆನಾ ಬಿಟ್ಟು ಬರಲಾರೆ |
ಮಾವಯ್ಯ ನಾವು ಬಂದು ಆರೇಳು ದಿನವಾದೋ
ಹವಳದ ಮಳೆ ಮೋಡ ಕವಿದಾವು ||
ಅತ್ತೆಮ್ಮ ನಾವು ಬಂದು ಹತ್ತೆಂಟು ದಿನವಾದೋ |
ಹವಳಾದ ಮಳೆ ಮೋಡ ಕವಿದಾವು ||

ಮಾವನ ಮಗಳು ಅತಿರಂಭೆನಾ ಬಿಟ್ಟು ಬರಲಾರೆ |
ಅತ್ತೇಯ ಅರಮನೆಲಿ ಹತ್ತೆಂಟು ಮಡದಿಯರು
ಯಾರನ್ನು ಮಡದಿಯೆಂದು ಹಿಡಿಯಾಲೊ? ||
ಎಲ್ಲವರ ಜಡೆ ಮೇಲೆ ಸಂಪಿಗೆ ಹೂವುಂಟು
ನಿನ್ನಾ ಮಡದೀಯ ಜಡೆ ಮೇಲೆ ಚಿನ್ನಾದ ಹೂವೆಸಳು
ಮಡದೀನ ಕರಕೊಂಡು ನಡಿಮುಂದೆ ||

ಅಣ್ಣಯ್ಯ ನಾವು ಬಂದು ಆರೇಳು ದಿನವಾದೋ ಹೋಗಾನ ಬನ್ನಿ
ಅರಮನೆಗೆ || ಚಿನ್ನಾದ ಮಳೆ ಮೋಡ ಕವಿದಾರು ಕವಿಯಾಲಿ
ಹೆಜ್ಜೆ ಹೆಜ್ಜೆಗೆ ಹಲಗೆ ಹಾಕಿಸುವೆ ||

***

# ಹೆಣ್ಣು ಇಳಿಸುವಾಗ ಬುದ್ಧಿ ವಾದ

ಮಗಳೇ ಜಾನಕಿ ನಿನ್ನಾ ಸುಗುಣ ಸನ್ ಮೋಹನ
ರಘುಕುಲರನ್ನ ಮನೋರಮ ಮಗಳೆ ರಾಮನ ಅಗಲದಿರು ||
ಪತಿ ಏಳುವ ಮೊದಲು ಜಾಗ್ರತೆಯಲಿ ಎದ್ದು ಗೃಹಕೃತ್ಯ
ಗಳನ್ನೆಲ್ಲಾ ಅನುಸರಿಸಿ ನಡೆ ಮಗಳೇ ಹಿತವಾಗಿ ಬಾಳು ಪತಿಯೊಳು ||
ಗಂಡನ ಮಾತಿಗೆ ಎದುರುತ್ತ ರ ಕೊಡದಿರು ಮಗಳೇ |
ಗಂಡನುಣ್ಣು ವ ಮೊದಲು ನೀ ಉಣ್ಣ ದಿರು ಮಗಳೇ |
ಉಣ್ಣ ದಿರು ನೀ ಪುಂಡರಿಕಾಕ್ಷನ ಪಟ್ಟದರಸೀ ||
ಮುಗುಳು ನಗದಿರು | ಜಗಳ ಮಾಡದಿರು |
ಜಗದೊಳು ಕೀರ್ತಿವಂತಳಾಗು | ನೀ
ಬಂಧುಗಳಲಿ ಹಗೆಯ ಮಾಡದಿರು ಕೃಪೆತೋರು ||
ನೆರೆಮನೆಗೆ ಹೋಗದಿರು | ಒಂದೆ ಮಾತಾಡದದಿರು |
ಗುರು ಹಿರಿಯರಿಗೆ ನಮಸ್ಕ ರಿಸು | ನಮಸ್ಕ ರಿಸು ||
ಬಂಧುಗಳಲಿ ಹಗೆಯನು ಮಾಡದಿರು |
ಧರ್ಮವ ಆಚರಿಸು | ಸತ್ಯವನು ಸುಖಿಗೊಳಿಸು ||
ಕ್ಷ ಮೆಯಲಿ ಧರೆಯಂತೆ | ಕ್ಷ ಮೆಯಲಿ ಮಾತೆ |
ಸುರತ ಸಮಯದಿ ದೇಶ ತರುಣಿಯಂತೆ
ರಾಮನ ಮಮತೆ ಮಾಡಮ್ಮಾ ||
ಮಾವ ಅತ್ತೆ ಯ ಮಾತಿಗೆ ಪ್ರತಿಯುತ್ತ ರ ಕೊಡದಿರು
ಪ್ರತಿಯೊಬ್ಬರ ಸ್ಥ ಳದಿ ನಿಲ್ಲ ದಿರು ನೀ ನೀರಜ
ನಂದಿನಿ ನೀ ಸತ್ಯ ವಚನವನು ಸವಿಮಾಡು ||
ವೃದ್ಧ ಮಾವನ ಪಾದ ಒತ್ತಿ ಪೂಜೆಯ ಮಾಡಿ
ಶುದ್ಧ ಭಾವದಿಂದಲಿ ನಡೆ ನೀ ಮಗಳೇ ಜಾನಕಿ
ನಿತ್ಯ ಸುಮಂಗಲೆ | ಮುದ್ದಾ ಗಿ ಬಂಧು ಬಳಗಕ್ಕೆ ನಡೆಮಗಳೇ
ಕಂಡರೆ ವಶಿಷ್ಠರ ದಂಡ ನಮಸ್ಕರಿಸು ||
ಹಿಂಡು ದಾಸ ದಾಸಿಯರ ದಣಿಸದಿರು |
ನೀ ಉತ್ತ ಮಳೆಂಬಂತೆ ಭೂಮಂಡಲ ಕೀರ್ತಿ ಪಡೆಪೂರ್ತಿ ||
ಮೈದುನರನು ತನ್ನ ಮಕ್ಕ ಳಂತೆ ನೋಡು |
ಪಂಕ್ತಿ ಭೇದವ ಮಾಡದಿರು ಕೃಪೆತೋರು ||
ಲಕ್ಷ್ಮಿ ನಾರಾಯಣರಂತೆ ಸೀತಾರಾಮರು ನೀವು |
ಕಕ್ಷಿ ಭೂಮಿ | ಈ ಕೀಳು ಜಗವನು ಜಗವನು
ನಮ್ಮ ನು ಸಂರಕ್ಷ ಣೆ ಮಾಡಿ ಸುಮಂಗಲಿಯಾಗಿ ಸುಖವಾಗಿರಿ... ||

# ಹೆಣ್ಣು ಇಳಿಸುವುದು

ಪಟ್ಟೆ ಅಂಚಿನ ಮುದ್ದು ಮುತ್ತಿನ ಉಂಗುರವನ್ನಿಟ್ಟು।
ಚಿನ್ನದ ಹರಿವಾಣ ಬಲಕೈಲಿ। ಚಿನ್ನದ ಹರಿವಾಣ ಬಲಕೈಲಿ
ಹಿಡಕೊಂಡು ಮಗಳಾ ನಿಮ್ಮ ವಶ ಕೊಡುತೇವೆ॥

ಸಾಲು ಅಂಚಿನ ಮುದ್ದು ನೀಲ ದುಂಗುರವನ್ನಿಟ್ಟು।
ನೀಲದ ಹರಿವಾಣ ಬಲಗೈಲಿ। ನೀಲದ ಹರಿವಾಣ ಬಲಕೈಲಿ।
ಹಿಡಕೊಂಡು ಮಗಳಾ ನಿಮ್ಮ ವಶ ಕೊಡುತೇವೆ॥

ಆರು ವರುಷ ಸಾಗಲಿಲ್ಲಾ। ಬಾಯಿ ಹಲ್ಲು ತೆಗೆಯಲಿಲ್ಲಾ
ಆರೆಂಬಾ ಲೆಕ್ಕ ಅರಿಯಳು ನಮ್ಮಗಳು।
ಮಗಳಾ ನಿಮ್ಮ ವಶ- ಕೊಡುತೇವೆ॥

ಗಿಂಡಿ ಬೆಳಗಲರಿಯಳು। ಅಂಗಳ ಗುಡಿಸೋಳಲ್ಲಾ।
ತಂಗಳೂಟ ಮಾಡೋಳಲ್ಲಾ। ಅಂಗಳದಲಿ ಆಡುವ।
ಶಿಶು ಮಗಳಾ ನಿಮ್ಮ ವಶ ಕೊಡುತೇವೆ॥

ಅಣ್ಣಗು ತಮ್ಮಗು ಮೋಹದ ಕಿರುತಂಗಿ। ಸೆಲೆ ಎಣ್ಣೆ
ಬಿಟ್ಟು ಸಲುಹ್ಯಾರು। ಸೆಲೆ ಎಣ್ಣೆ ಬಿಟ್ಟು ಸಲುಹೀದ ಮಗಳಾ॥
ಮಗಳಾ ನಿಮ್ಮ ವಶ ಕೊಡುತೇವೆ॥

ಹಣ್ಣಡಿಕೆ ಎಲೆಮೆದ್ದು ಕಣ್ಣಗೆ ಕನವಿರ್ದು
ತಂದೆ ತೊಡೆ ಮೇಲೆ ಒರಗ್ಯಾಳು। ನಮ್ಮಗಳು
ಮಗಳಾ ನಿಮ್ಮ ವಶ ಕೊಡುತೇವೆ॥

ಕಾಯಡಿಕೆ ಎಲೆಮೆದ್ದು ಕಣ್ಣಗೆ ಕನವಿರ್ದು
ತಾಯಿ ತೊಡೆ ಮೇಲೆ ಒರಗಿದ ನಮ್ಮಗಳು।
ಮಗಳಾ ನಿಮ್ಮ ವಶ ಕೊಡುತೇವೆ॥

ಮುತ್ತೀನ ತಲೆಕಂಬಾ-ಈಗೆರಡು ಇದ್ದಾವು।
ಮುತ್ತೀನ ಕಂಬಾ ಬೇಡಾವಾದೋ

ಕನ್ಯೆ ಹುಟ್ಟಿದಾ ಮನೆಗೆ ಕನ್ನಡಿ ಯಾಕವ್ವಾ।
ಕನ್ಯೆ ನಮ್ಮಗಳು ಒಳಗಿಂದ ಬರುವಾಗ ಕನ್ನಡಿಯಂತೆ ಹೊಳೆದಾಳು॥

ಬಾಲೆ ಹುಟ್ಟಿದಾ ಮನೆಗೆ ಬೀಸಣಿಗೆ ಯಾಕವ್ವಾ?
ಬಾಲೆ ನಮ್ಮಗಳು ಒಳಗಿಂದ ಬರುವಾಗ। ಬೀಸಣಿಗೆಯಂತೆ ಸುಳಿವಳು॥

ಆಡುವ ಆಟವ ಬಿಟ್ಟು | ಕೂಡಿ ಆಡುವವರಾ ಎಣೆ ಬಿಟ್ಟು
ಅಣ್ಣ ತಮ್ಮಂದಿರಾ ಮನೆಬಿಟ್ಟು ಮಗಳಾ ನಿಮ್ಮ ವಶ ಕೊಡುತೇವೆ||
ಒಂದು ಮೆಟ್ಟಿಲು ಇಳಿದಾಳು | ಹಿಂತಿರುಗಿ ನೋಡಿದಳು
ಅಪ್ಪಯ್ಯಾ ಬನ್ನೀಂತ ಕರೆದು ಮಾತಾಡಲು
ತುಂಬೀದ ಕಣ್ಣಾ ಜಲನೀರು ಹರಿದಾವು |
ಪಟ್ಟೆಯ ಸೆರೆಗೆಲ್ಲಾ ನೆನೆದಾವು || (ತಾಯಿ, ಅಣ್ಣಾ ಹೀಗೆ)
ಮೂಡಣ ಮಂಟಪದಲಿ ನಿಂತಾಳು ಮದುಮಗಳು
ಕೂಡ್ಯಾಡಿ ಆಡುವ ಸಂಸಾರ ಕರೆದು ಮಾತಾಡಲು
ತುಂಬೀದ ಕಣ್ಣಾ ಜಲನೀರಾ ||
ಮುತ್ತೀನ ತೋರಣ ತನಕ ತಂದೆ ತಾಯಿಯರು
ಚಿಕ್ಕಕ್ಕಾ ಮಕ್ಕಳು ಹೊಳೆ ತನಕಾ || ಬರುವಾಗ ಕಣ್ಣೀರು
ಪಟ್ಟೇ ಸೆರೆಗೆಲ್ಲಾ ನೆನೆದಾವು ||
ಮಾವ ಬರುವಾಗ ಎದುರಿಗೆ ನಿಲ್ಲದಿರು | ಮಾವಗೆ
ಎದುರುತ್ತರ ಕೊಡದಿರು ಮಗಳೇ |
ಹಾಲು ಹಣ್ಣು ಕೊಟ್ಟು ಸಲುಹ್ಯಾರು ||
ಅತ್ತೆ ಬರುವಾಗ ಎದುರಿಗೆ ನಿಲ್ಲದಿರು |
ಅತ್ತೆಗೆ ಎದುರುತ್ತರ ಕೊಡದಿರು ಮಗಳೇ...ಬಾ
ಬಾಲೆ ಎಂದು ಕರೆದಾರು ||
ಪುರುಷ ಬರುವಾಗ ದೇವರಂಬಂತೆ |
ಪುರುಷ ನಿಗುತ್ತರ ಕೊಡದಿರು ಮಗಳೇ |
ಪಟ್ಟೇಯಾ ಕೊಟ್ಟು ಸಲುಹಾರು ||
ಮಗಳತ್ತ ಕಳುಹಿಸಿ | ತಾವಿತ್ತ ತಿರುಗಿದರು |
ಮಗಳು ಸಾಕೆಮ್ಮಾ ಜನುಮಕ್ಕೆ....|
ಬಳೆಗಾರ ಬಳೆ ಸೆಟ್ಟಿ ಬಳೆಯಾಕೆ ನೀ ತಂದ್ಯೋ
ಬಳೆಯಿಡುವಾ ಮಗಳು ಮನೆಲಿಲ್ಲಾ....|
ಹೂಗಾರ ಹೂಸೆಟ್ಟಿ ಹೂವ್ಯಾಕೆ ಇಲ್ಲಿ ತಂದ್ಯೊ
ಹೂ ಮುಡಿವಾ ಮಗಳು ಮನೆಲಿಲ್ಲಾ....|
ಮನೆಸುತ್ತ ಮಲ್ಲಿಗೆ ಕೆರೆಸುತ್ತಾ ಕೇದಿಗೆ |
ಕೊಯ್ದು ಮುಡಿಯುವಾ ಮಗಳಿಲ್ಲಾ ಸೆಟ್ಟಿಗರೇ ಅವಳೀಗಾ
ಬಾಳುವವರ ಮನೆಗೆ ನಡೆದಾಳು ||

# ಹೆಣ್ಣನ್ನು ಇಳಿಸುವಾಗ

ಎಮ್ಮ ಮನೆಯಂಗಳದಿ ಬೆಳದೊಂದು ಹೂವನ್ನೂ |
ನಿಮ್ಮ ಮಡಿಲೊಳಗಿಡಲು ತಂದಿರುವೆವ್ಪೂ ||
ಕೊಳ್ಳಿರೀ ಮಗುವನ್ನು ಎಮ್ಮ ಮನೆ ಬೆಳಕನ್ನು |
ನಿಮ್ಮ ಮನೆಯನು ತುಂಬಲೊಪ್ಪಿಸುವವ್ಪೂ ||
ಮರೆಮೋಸ ಕೊಂಕುಗಳನು ಅರಿಯಳಿವಳೂ |
ಇನಿತು ವಿಶ್ವಾಸವನು ಕಂಡರಿಯಳೂ ||
ಕಷ್ಟಗಳ ಸಹಿಸದೆಯೆ ಕಾಣದೆಯೆ ಬೆಳೆದವಳೂ |
ಸಲಹಿ ಕೊಳ್ಳಿರೀ ಮಗುವನೊಪ್ಪಿಸುವೆವ್ಪೂ ||
ಕಠಿಣಗಳ ನೆಳಲ್ ಸುಳಿಯಲದುರಿ ಬಾಡುವಳು |
ಹರಿಮಂಜು ಬಳಲಿಸಿದ ಹೂವಿನಂತೆ ||
ಸುಖದಲಿ ದುಃಖದಲಿ ಎಲ್ಲ ದೆಸೆವಿನರಲಿ |
ನಿಮ್ಮ ಪಾಲಿಗೆ ನಿಲುವಾ ಕುವರಿಯವಳೂ ||
ನಿಮಗಿವಳು ನೀಡುತಿಹ ಹಾಲು ಹಣ್ಣುಗಳ ಸವೀ |
ಎಂದೆಂದೂ ಇವಳ ನಡೆ ನಿಮ್ಮ ಪರವಾಗಿ ||
ನಿಮ್ಮ ಕೀರುತಿ ಬೆಳೆಯಲಿವಳ ಸೌಜನ್ಯದಲಿ |
ನಿಮ್ಮ ಕುಲಶೀಲಗಳು ಮರುಕಳಿಸಲಿ ||
ನಿನ್ನ ಮಡದಿಯ ಕೊಂಡು ಸುಖವಾಗಿರು ಮಗುವೆ |
ನಿಮ್ಮ ಸೊಸೆ ಸೋದರಿಯು ಕೊಳ್ಳಿರಿವಳಾ ||
ಜೀವನದ ಸಾಗರದಿ ಸಂಸಾರ ನೌಕೆಯನು
ಆದರಿಪ ಹುಟ್ಟಿನಂತಿಹ ಜೀವಯಿವಳೂ ||
ಕೈ ಬಿಡದೆ ಕಾಯುವರೆ ಪ್ರೇಮದಿಂದಲಿ ದಿನವು |
ಇಂದಿನಿಂದೆಂದೆಗೂ ನಿಮ್ಮವಳು ಇವಳೂ ||
ಅತ್ತೆ ಮಾವಂದಿರನು ತಾಯ್ತಂದೆಯೆಂದರಿತು |
ನಿತ್ಯ ನಿರ್ಮಲೆಯಾಗಿ ಸೇವೆಯನು ಮಾಡು ||
ಪತಿಯೆ ದೇವರು ನಿನಗೆ ಸರ್ವಸ್ವವ್ಪೂ |
ಪಾದ ಸೇವೆಯ ಮಾಡು ದಾಸಿಯಂತಿರು ನೀನೂ ||

ಪತಿಯ ಗೃಹಕೃತ್ಯದೊಳು ಮಂತ್ರಿಯವರೆಗೆ |
ಉಣಿಸುಗಳ ನೀಡಲಾತನ ಮಾತೆಯೆ ನೀನು ||

ಪ್ರೀತಿಯಿಂದೊಡಗೂಡಿ ಸಂತಸದಿ ಬಾಳು |
ಹೆತ್ತವರ ಮನೆಗಿಂದು ಹೊರಗಾದೆ ನೀ ಮಗಳೇ ||

ಆ ಮನೆಯ ಅವರೇ ನಿನ್ನವರು ಮುಂದೆ |
ಅವರೇ ದೇವರು ದೇವರುಗಳೂ ||

ಆವ ಬಳುವಳಿ ಕೊಡಲಿ ಮಗಳೇ ನಾನಿನಗೆ?
ಆವ ವಸ್ತುಗಳನ್ನಿತ್ತು ಕಳುಹಲಿ ಮನೆಗೆ ||

ಮಾವನ ಮನೆಗಿಂದು ತೆರಳುವಾ ಮಗಳೇ |
ದೇವರಿತ್ತಿಹ ವಸ್ತು ವಾಹನವ ಕೊಡಲೇ?||

ಬಡತನದಿ ಬೆಂದು ಬಡವಾಗುತಿರ್ದ |
ಕಡು ಮಮತೆಯಲಿ ನಿನ್ನ ಸಾಕಿ ಸಲಹುವೆನು ||

ಅಡಿಗಡಿಗೆ ಬರುತಿರ್ದ ತೊಡರುಗಳ ಸಹಿಸಿ |
ಬಡತನ ಕಡಲಿನಲಿ ದಡ ಸೇರದಿರ್ದ ||

ಮಗಳೇ ಸತಿಯೆಂಬ ಶೃತ ವಚನವನು |
ಮತಿಯವಳೆ ನೀ ನಡೆಸುತ್ತಾ ಬಾಳು ||

ಪತಿಯ ಮಾತನು ಅಲ್ಲಗಳೆಯದಿರು |
ಪತಿಯೆ ಪರದೈವವೆಂದು ನಂಬು ವಧುವೇ ||

ನಿಲ್ಲು ಕಣ್ಣೊರೆಸಿಕೊಳ್ಳು, ಮುದ್ದು ನೀನಳದಿರು |
ತಾಯಿಯಿರಾ | ತಂದೆಯಿರಾ ಪಡೆವಳಾ

ಎರಡು ಮನೆಗಳ ಹೆಸರು ಖ್ಯಾತಿಗಳು ಉಳಿಸುವಂತೆ
ತುಂಬಿದಾಯುಷ್ಯದಲಿ ಬಾಳಿ ಬದುಕು ಮಗಳೇ ||

****

ಮುತ್ತು ಕಟ್ಟಿದ ಕಂಬಾ | ಮುತ್ತೊಂದು ಬಿಡಲಾರೆ
ನಿಸ್ತ್ರೀ ಮದುಮಗಳಾ ಕಳುಹಿಸಿ ಕೊಟ್ಟಾರೆ
ಕತ್ತಲಾದವು ಮನೆಯೆಲ್ಲಾ...||

ಚಿನ್ನಾ ಕಟ್ಟಿದ ಕಂಬಾ | ಚಿನ್ನೊಂದು ಬಿಡಲಾರೆ |
ಕನ್ಯೆ ಮದುಮಗಳಾ ಕಳುಹಿಸಿ ಕೊಟ್ಟಾರೆ |
ಬೇಜಾರಾದುವು ಮನೆಯಲ್ಲಾ....||

ಕನ್ಯೆ ಹುಟ್ಟಿದ ಮನೆಗೆ ಕನ್ನಡಿ ಯಾಕವ್ವಾ?|
ಕನ್ಯೆ ನಮ್ಮಗಳು ಒಳಗಿಂದ ಬರುವಾಗ |
ಕನ್ನಡಿಯಂತೆ ಹೊಳೆವಳು...||

ಹೆಣ್ಣು ಹುಟ್ಟಿದ ಮನೆಗೆ ಬೀಸಣಿಗೆ ಯಾಕವ್ವಾ|
ಹೆಣ್ಣು ನಮ್ಮಗಳು ಒಳಗಿಂದ ಬರುವಾಗ|
ಬೀಸಣಿಗೆಯಂತೆ ಸುಳಿವಾಳು...||

ಹುಟ್ಟಿದ ಮನೆಮೆಟ್ಟು ಕನ್ಯೆ ಇಳಿಯುವಾಗ
ಹೊಟ್ಟೆಯು ಜಮ್ಮಾ ಜನೀರೆಂದು || ಕಣ್ಣೀರು
ತಾಯಿ ಬರಲೆಂದು ಕರೆದಾಳು || ಕೈ ಚಾಚಿ ಕೈಯಾ ಮುಗಿದಾಳು...||

ಜನಿಸಿದ ಮನೆಮೆಟ್ಟು ಬಾಲೆ ಇಳಿಯುವಾಗ |
ಒಡಲಿಂದ ಜಮ್ಮಾ ಜನೀರೆಂದು || ಕಣ್ಣೀರು
ಪಟ್ಟೆ ಸೆರಗೆಲ್ಲಾ ನೆನೆದಾವು ||

ಮಗಳತ್ತ ಕಳುಹಿಸಿ | ಹಿಂತಿರುಗಿ ನೋಡಿದನು |
ತೂಗು ಮಂಚದಲಿ ಕುಳಿತಾನು || ಅವಳ ತಂದೆ|
ಚೊಚ್ಚಲದ ಮಗಳಾ ನೆನೆಯುತ್ತಾ....||

ಆಡುವ ಆಟಬಿಟ್ಟು | ತೂಗುವ ತೊಟ್ಟಿಲಬಿಟ್ಟು |
ಕೂಡಿ ಆಡುವವರಾ ಎಣ್ಣೆ ಬಿಟ್ಟು || ಬರುತಾಳೆ
ರಕ್ಷಿಸಬೇಕು ಮಗಳನ್ನೂ...||

ಮುತ್ತು ಕಟ್ಟಿದ ಕಂಬಕ್ಕೆ | ಸಾರಿ ನಿಂತವನೀಗಾ|
ಮಾಲೆ ಇಟ್ಟವನು ಬಿಡನೊಲ್ಲಾ ಮದುಮಗಳಾ
ಬಾಳುವವರ ಅರಮನೆಗೆ ಇಳಿ ಈಗ ||

ಮಂಗಳವಾರದ ದಿವಸದಲಿ | ನಾಗೋಲಿಯ ಮದುವೇಗೆ
ನಾವು ಎಲ್ಲ ವರೂ ಬರುತೇವೆ | ಚಿಂತಿಸಬೇಡಾ ಮನದಲ್ಲೀ
ಚಿನ್ನದ ಪುತ್ಥಳಿಯೇ ಅಳದಿರು ||

ಮುತ್ತಿನ ತೋರಣ ತನಕ ಅಕ್ಕತಂಗಿಯರು | ಮತ್ತೆ
ಇದ್ದವರು ಹೊಳೆತನಕಾ ಬರುತಾರೆ |
ಚಿನ್ನಾದ ಪುತ್ಥಳಿಯೇ ಅಳಾ..ದಿರು ||

ಆನೆಗೇರಿದಳು ತಾ ತಿರುಗಿ ನೋಡಿದಳು | ತಂದೆ
ಬರಲೆಂದು ಕರೆದು ಮಾತನೆ ಆಡಿ
ಕಂಕಣದಾ ಕೈಯಾ ಮುಗಿದಾಳು || ತಾಯಿ ಬರಲೆಂದು ಕರೆದಾಳು ||

ಮಗಳತ್ತ ಕಳುಹಿಸಿ ತಾವಿತ್ತ ತಿರುಗಿದರು |
ಮಗಳು ಸಾಕೆಮ್ಮಾ ಜನುಮಕ್ಕೆ ಎಂದು
ಚೊಚ್ಚಲದಾ ಮಗಳಾ ನೆನೆದಾರು ||

ಮುತ್ತು ಕಟ್ಟಿದ ಕಂಬಾ ಮುತ್ತೊಂದು ಬಿಡಲಾರೆ |
ಕನ್ಯೆ ಮದುಮಗಳಾ ಕಳುಹಿಸಿ ಕೊಟ್ಟಾರೆ |
ಕತ್ತಲಾದವು ಮನೆಯೆಲ್ಲಾ | ಬೇಜರಾದುವು ಮನೆಯೆಲ್ಲಾ ||

****



# ದಿಬ್ಬಣದ ಮುಖ್ಯಸ್ಥರಿಗೆ ಹೆಣ್ಣನ್ನು ವಹಿಸಿಕೊಡುವುದು

| | | |
|---|---|---|
| ಹೆಣ್ಣಿನ ಕಡೆಯವರು | : | ಪರಮ ವೈಭವದಿಂದ ತಮ್ಮ ಇಷ್ಟ ಮಿತ್ರರಿಂದೊಡಗೂಡಿ ಪುರುಷನ ಕಡೆಯಿಂದ ಆಗಮಿಸಲ್ಪಟ್ಟ ದಿಬ್ಬಣದ ಮುಖ್ಯಸ್ಥರಾದ ಮಹಾನೀಯರು ಯಾರಯ್ಯ? |
| ಗಂ.ಕ. | : | ನಾವಯ್ಯ. |
| ಹೆ.ಕ | : | ಹಾಗಾದರೆ ನಾವು ನಮ್ಮ ಪೂರ್ವ ಪದ್ಧತಿಯಂತೆ ವಿಜ್ಞಾಪನೆಯನ್ನು ಸ್ವೀಕರಿಸಿ, ಚಂದ್ರರಾಜನೆಂಬ ಪುರುಷನಿಗೆ, ಪದ್ಮಾವತಿಯೆಂಬ ಕನ್ನಿಕೆಯನ್ನು ವಧು- ವರರನ್ನಾಗಿ ಮಾಡುವುದೆಂದು ಈ ಮೊದಲು ಮನದತ್ತ ಮಾಡಿ, ಆಮೇಲೆ ವಾಗ್ದತ್ತ ಮಾಡೋಣಾವಾಯ್ತು ಅಲ್ಲವೊ? |
| ಗಂ.ಕ. | : | ಹೌದು. |
| ಹೆ.ಕ | : | ವಾಗ್ದಾನದ ಮೇರೆಗೆ ನಾವು ಉಭಯ ಸಮಸ್ತರು ಕೂಡಿ, ಆಕಾಶದಷ್ಟು ದೊಡ್ಡ ಚಪ್ಪರವನ್ನು ಹಾಕಿ, ಭೂಮಿಯಷ್ಟು ದೊಡ್ಡ ಹಸೆಯನ್ನು ಬರೆದು, ರತ್ನ ಖಚಿತವಾದ ಮಂಟಪದಡಿಯಲ್ಲಿ -ಅಗ್ನಿ ಸಾಕ್ಷಿಯಾಗಿ ನಮ್ಮ ಕನ್ಯಾರತ್ನವನ್ನು ಧಾರೆಯೆರೆದು ಕೊಟ್ಟಿದ್ದೇವಷ್ಟೆ? |
| ಹೆ.ಕ | | ಹಾಗಾದರೆ ನಿನ್ನೆಯ ದಿವಸ ಪುರುಷನನ್ನು ಮನ್ಮಥನಂತೆಯೂ, ಕನ್ನಿಕೆಯನ್ನು ರತಿದೇವಿಯಂತೆಯೂ ಶೃಂಗರಿಸಿದಲ್ಲಾಗಲಿ, ರೂಪು ಲಾವಣ್ಯದಲ್ಲಾಗಲೀ, ಏನೊಂದು ಕುಂದು ಕೊರತೆಯಿಲ್ಲದೆ ಕಾಮ ಚಕ್ರೇಶ್ವರನನ್ನು ಹೋಲುವ ಪುರುಷನ ದ್ವಿಯ ಹಸ್ತಗಳಿಗೆ ಚಾರುಹಸ್ತಗಳನ್ನಾಗಿ ಮಾಡಿದ್ದರಲ್ಲಾಗಲೀ ಯಾವ ಲೋಪ-ದೋಷಗಳು ಕಂಡಿಲ್ಲವಷ್ಟೆ-? |
| ಗಂ.ಕ. | | ಇಲ್ಲ. |
| ಹೆ.ಕ | | ಹಾಗಾದರೆ ನಮ್ಮ ಮುದ್ದು ಬಾಲಕಿಯನ್ನು ನಿಮ್ಮ ಸ್ವಾಧೀನಕ್ಕೆ ಒಪ್ಪಿಸಿಕೊಡುತ್ತೇವೆ. ಹಾಗೆ ಒಪ್ಪಿಸಿ ಕೊಡುವಾಗ ಬಾಲಕಿಗೆ ಹನ್ನೆರಡು, ಹನ್ನೆರಡು ಇಪ್ಪತ್ತನಾಲ್ಕು ವರಹಗಳನ್ನೂ ಉಡಲು ವಸ್ತ್ರವನ್ನೂ, ತೊಡಲು ಚಿನ್ನಾಭರಣಗಳನ್ನೂ, ಊಟ ಮಾಡಲು ಬೆಳ್ಳಿಬಟ್ಟಲನ್ನು, ಕೈ ತೊಳೆಯಲು ಬೆಳ್ಳಿ ಗಿಂಡಿಯನ್ನೂ , |

ಕರೆದುಣ್ಣಲು ಗೋವಿನ ಹಿಂಡನ್ನೂ, ಬಳುವಳಿಯಾಗಿ ಕೊಟ್ಟಿರುತ್ತೇವೆ.

ಹೀಗೆ ನಾವು ಕೊಟ್ಟ ಅಲ್ಪ ಐಶ್ವರ್ಯವನ್ನು ಒಂದಕ್ಕೆ ಹತ್ತು, ಹತ್ತಕ್ಕೆ ನೂರು, ನೂರಕ್ಕೆ ಸಾವಿರಗಟ್ಟಲೆ ಅಭಿವೃದ್ಧಿ ಮಾಡಿ ಕೀರ್ತಿ ಗಳಿಸುವಂತೆ ಮಾಡುವವರು ಯಾರಯ್ಯ?

ಗಂಡಿನ ಕಡೆಯವರು : ವರನಯ್ಯ.

ನಮ್ಮ ಬಾಲಕಿಗೆ ಕಡೆ ಹಲ್ಲು ಬರಲಿಲ್ಲ-ನೆತ್ತಿ ಎಣ್ಣೆ ಆರಲಿಲ್ಲ-ಅಂಗೈ ಗೆರೆ ಮಾಜಲಿಲ್ಲ-ಬುದ್ಧಿ ಜ್ಞಾನ ಬರಲಿಲ್ಲ-ಹೆತ್ತ ತಂದೆ ತಾಯಿಯರ ನೆನಪು ಮರೆಯಲಿಲ್ಲ. ಹಸಿ ಕಡಿಯಲರಿಯಳು ಒಣಗಿಲು ಮುರಿಯಲರಿಯಳು। ಅಂಗಳದಲ್ಲಿ ಆಡಿ ಹಾಲನ್ನವನ್ನು ಉಂಡು ಮೆಟ್ಟಿಲಲ್ಲಿ ಓಡಿ ತೊಟ್ಟಿಲಲ್ಲಿ ಮಲಗಬೇಕೆಂದು ಇಚ್ಛಿಸುವ ಬಾಲಕಿಗೆ ತಕ್ಕ ಬುದ್ಧಿ ವಾದವನ್ನು ಬೋಧಿಸುವಂತಹ ಬೋಧಕರು ಯಾರಯ್ಯ?

ಗಂಡಿನ ಕಡೆಯವರು : ವರನ ಹಿರಿಯರು.

ಹೆ.ಕ. : ನಮ್ಮ ಬಾಲಕಿಯು ಚಿಕ್ಕದಾಗಿರುವ ಕಾಲದಿಂದಲೂ ಮಾವನ ಮನಗುಣವನ್ನು ಅರಿಯಳು; ಅತ್ತೆಯ ಅತಿ ಕೆಲಸವನ್ನು ತಿಳಿಯಳು. ಭಾವ ಮೈದುನರ ಭಾವನೆ ಗೊತ್ತಿಲ್ಲ. ಕುಟುಂಬದ ಕೂಟ ಕೂಡಿದವಳಲ್ಲಾ ಹೀಗಿರುವಲ್ಲಿ ಏನಾದರೂ ಮಾತಿನಲ್ಲಿ ಕಲಹಗಳು ಉಂಟಾದರೆ ಇಂತಹ ಕಲಹಗಳನ್ನು ಉಪಶಮನ ಮಾಡುವಂತಹ ಉಪಶಯಕರು ಯಾರಯ್ಯ?

ಗಂಡಿನ ಕಡೆಯವರು : ಹಿರಿಯರು.

ಹೆ.ಕ. : ಹಾಗಾದರೆ ದಿಬ್ಬಣದ ಮಹಾಶಯರೇ ನಾವು ಹೇಳಿದ ಮಾತಿಗೆ ಎರಡೆನ್ನದೆ ನಾವು ಕೊಡುವ ಕನ್ಯಾರತ್ನವನ್ನು ಭಕ್ತವತ್ಸಲನು ಭಕ್ತರನ್ನು ಪ್ರೀತಿಸುವಂತೆಯೂ ನರಹರಿಯು ಕೂರ್ಮೇಶನನ್ನು ಕಾಯುವಂತೆಯೂ ಪ್ರೀತಿಸುವಿರಾಗಿ ನಂಬುತ್ತೇವೆ.

ಇನ್ನು ಮುಂದೆ ಈ ನವ-ದಂಪತಿಗಳನ್ನು ಭಕ್ತವತ್ಸಲನು ನಾಭಿ ಕಮಲದಲ್ಲಿ ಬ್ರಹ್ಮನಿಗೆ ಸ್ಥಾನವಿತ್ತವನಾದ ಆ ಕ್ಷೀರ ಶಯನ ಶ್ರೀಮನ್ನಾರಾಯಣನೇ ಕಾಪಾಡಲೆಂದು ನಾವೆಲ್ಲರೂ ವಂದಿಸೋಣಾ ।

ಹತ್ತು ಕುಟುಂಬ ಹದಿನೆಂಟು ಗೋತ್ರ ದೇವ ಸಭೆ-ಸಂಸಾರ ಸಂಗಡ ಕೇಳಿ ಮದುಮಕ್ಕಳನ್ನು ದಿಬ್ಬಣದ ಮುಖ್ಯಸ್ಥರಿಗೆ ವಹಿಸಿ ಕೊಡುವಂತೆಯೇ..... ವಾದ್ಯ.ಕುಣಿತ.

# ವಧುವನ್ನು ವರನ ಕಡೆಯ ಮುಖ್ಯಸ್ಥರಿಗೆ ಒಪ್ಪಿಸುವ ಪದ್ಧತಿ

ಹೆಣ್ಣಿನ ಕಡೆಯವರು : ಪರಮ ವೈಭವದಿಂದ ತಮ್ಮ ಇಷ್ಟಮಿತ್ರರಿಂದೊಡಗೂಡಿ, ಪುರುಷನ ಕಡೆಯಿಂದ ಆಗಮಿಸಲ್ಪಟ್ಟ ದಿಬ್ಬಣದ ಮುಖ್ಯಸ್ಥರಾದ ಮಹಾನೀಯರು ಯಾರಯ್ಯ?

ಗಂಡಿನ ಕಡೆಯವರು : ನಾವಯ್ಯ !

ಹೆಣ್ಣಿನ ಕಡೆ : ಯಾವ ನಾಡು? ಯಾವ ಊರು? ಯಾವ ಮನೆಯವರು?

ಗಂ.ಕ. : ( ಸೂಕ್ತವಾದ ಪರಿಚಯ)

ಹಾಗಾದರೆ ನಮ್ಮ ಪೂರ್ವ ಪದ್ಧತಿಯಂತೆ, ವಿಜ್ಞಾಪನೆಯನ್ನು ಸ್ವೀಕರಿಸಿ, ಚಂದ್ರರಾಜನೆಂಬ ಪುರುಷನಿಗೆ ಪದ್ಮಾವತಿ ಎಂಬ ಕನ್ನಿಕೆಯನ್ನು ವಧು ವರರನ್ನಾಗಿ ಮಾಡುವುದೆಂದು ಈ ಮೊದಲು ಮನದತ್ತ ಮಾಡಿ, ಆಮೇಲೆ ವಾಗ್ದತ್ತ ಮಾಡೋಣವಾಯ್ತು ಅಲ್ಲವೋ?

ಗಂ.ಕ. : ಹೌದು.

ಹೆ.ಕ. : ವಾಗ್ದಾನದ ಮೇರೆಗೆ ನಾವು ಉಭಯಸ್ಥರು ಕೂಡಿ ಆಕಾಶದಷ್ಟು ದೊಡ್ಡ ಚಪ್ಪರ ಹಾಕಿ, ಭೂಮಿಯಷ್ಟು ದೊಡ್ಡ ಹಸೆ ಬರೆದು, ರತ್ನ ಖಚಿತವಾದ ಮಂಟಪದಡಿಯಲ್ಲಿ, ಸಮಸ್ತ ಬಂಧು ಬಾಂಧವರ-ಸಮಕ್ಷಮದಲ್ಲಿ ಅಗ್ನಿ ಸಾಕ್ಷಿಯಾಗಿ ನಮ್ಮ ಕನ್ಯಾರತ್ನವನ್ನು ಧಾರೆಯೆರೆದು ಕೊಟ್ಟಿದ್ದೇವಷ್ಟೆ!

ಗಂ.ಕ. : ಹೌದು.

ಹೆ.ಕ. : ಸಭಿಕರೇ, ನಾನು ಹೇಳುವ ಮಾತುಗಳನ್ನು ನೀವುಗಳು ಕೇಳಿಕೊಂಡು ತಪ್ಪುಗಳಿದ್ದರೆ ಮನ್ನಿಸಿ, ಭಾಗ್ಯಸಂಪನ್ನರಾದ ಮತ್ತು ಮಹಾನುಭಾವರಾದ ತಾವುಗಳು ನನಗೆ ತಿಳಿಸಬೇಕಾಗಿ ಪ್ರಾರ್ಥಿಸುತ್ತೇನೆ. ಅಯ್ಯಾ, ನಮ್ಮ ಕನ್ಯೆಯು ಹಾಲನ್ನವನ್ನು ಊಟ ಮಾಡಿಕೊಂಡು, ತೂಗುಮಂಚದ ಹಾಸಿಗೆಯ ಮೇಲೆ ಮಲಗಿ, ಯಾವಾಗಲೂ ಅಲಂಕರಿಸಿಕೊಂಡು ಕಷ್ಟಸುಖಗಳನ್ನರಿಯದೆ ಸುಖ ಸಂಪತ್ತಿನಿಂದ ಬಾಳುತಿದ್ದ, ಜನಕರಾಯನಲ್ಲಿ ಸೀತಾ ದೇವಿಯು ಮೆರೆಯುತ್ತಿದ್ದಂತೆ, ತನ್ನ ತಂದೆ ತಾಯಿಯರ ಮನಸ್ಸನ್ನು ಸಂತೋಷಗೊಳಿಸುತ್ತಾ

ಕತ್ತಲೆಯ ಹೊತ್ತಿನಲ್ಲಿ ಭೂಮಿಗೆ ಚಂದ್ರನು ಹೇಗೆ
ಪ್ರಕಾಶವನ್ನು ಕೊಡುತ್ತಿದ್ದನೋ ಅದೇ ರೀತಿ ತನ್ನ ಕುಟುಂಬಕ್ಕೆ
ಸಂತೋಷವನ್ನು ಕೊಡುತ್ತಿದ್ದಳು.

ಆದರೆ ಋಷ್ಯಾಶ್ರಮದಲ್ಲಿ ಶ್ರೀ ರಾಮಚಂದ್ರನು ವಿದ್ಯಾಶಾಸ್ತ್ರಗಳನ್ನು ಕಲಿತು ದಿವ್ಯ ಸಂಪನ್ನನಾಗಿ ಮೆರೆಯುತಿರುವ ನಿಮ್ಮ ಬಾಲಕನಿಗೆ ನಮ್ಮ ಕನ್ನಿಕೆಯನ್ನು ಕೊಡಬೇಕೆಂದು, ನಾವು ಉಭಯ ಕಡೆಯವರು ಕೂಡಿ ಜಾತಕ ಕೂಟ, ಮುಹೂರ್ತವನ್ನು ನೋಡುವಂತೆ ಬ್ರಾಹ್ಮಣರನ್ನು ಆಳುಬಿಟ್ಟು ಕಳುಹಿಸಿ, ನಮ್ಮ ನಾಲ್ಕು ಕಟ್ಟು, ಕಯ್ಯಾಲೆ ಬಾಡೆಯಲ್ಲಿ ಬಣ್ಣದ ಚಾಪೆ ಹಾಕಿ, ಸಣ್ಣಕ್ಕಿ ತುಂಬಿದ ತಟ್ಟೆ ಮೇಲೆ ನಂದಾದೀಪವನ್ನಿರಿಸಿ ಜಾತಕ ಗುಣಕೂಟ ಮುಹೂರ್ತವನ್ನು ನೋಡಿದಲ್ಲ, ನಮ್ಮ ಹೆಣ್ಣಿಗೂ ನಿಮ್ಮ ಗಂಡಿಗೂ ಸುಖ ಸಂಪನ್ನರಾಗಿ ಬಾಳುವ ಯೋಗವಿದ್ದುದರಿಂದ ನಾವುಗಳು ಬಂಧು ಮಿತ್ರರಿಗೆ ಹೇಳಿಕಳುಹಿಸಿ, ಕಾಗದ ಪತ್ರಗಳಿಂದ ಕರೆಯಿಸಿಯೂ ನಿಮ್ಮ ಭವನದಿಂದ ನಮ್ಮ ಭವನಕ್ಕೆ ದಿಬ್ಬಣ ಬಂದಿದ್ದೀರಿ.

ಗಂ.ಕ. : ಹೌದು!

ಹೆ.ಕ. : ಆದರೇ ನಿಮ್ಮ ಬಾಲಕನಿಗೆ ಸಾವಿರಾರು ವರಹದ ಚಿನ್ನಾಭರಣಗಳಿಂದ ಅಲಂಕರಿಸಿ, ನಮ್ಮ ಸ್ವಾಧೀನಕ್ಕೆ ಕೊಟ್ಟ ಮೇಲೆ ನಮ್ಮ ಮನೆದೇವರ ಅನುಗ್ರಹದಿಂದಲೂ ಮಹಾನುಭಾವರಾದ ಸಭಿಕರ ಕರುಣ ಕಟಾಕ್ಷದಿಂದಲೂ ಇದೇ ಭವನದ ಮುಂದುಗಡೆ ಹಾಕಿರುವ ಹನ್ನೆರಡು ಕಂಬಗಳ ಸೀತಾವಳಿ ಕಯ್ಯಾಲೆ ಚಪ್ಪರದ ಮೇಲ್ಕಟ್ಟಡಿಯಲ್ಲಿ ನಾವುಗಳು ಎಂದರೆ ಉಭಯ ಕಡೆಯವರು ಸಾಲುಕಟ್ಟಿ ನಿಂತು ಕನ್ಯೆ ಕೈಧಾರೆ ವೃತಗಳನ್ನು ಮಾಡಿ ನೀವು ತಂದಿರುವ ದ್ವಿಯ ಹಸ್ತಗಳನ್ನು ಚತುರ್ಹಸ್ತಗಳನ್ನಾಗಿ ಮಾಡಿದ್ದೇವೆ.

ಗಂ.ಕ. : ಹೌದು -

ಹೆ.ಕ. : ಆದರೆ ರೂಪದಲ್ಲಿ ಮನ್ಮಥನಿಗೆ ಹೋಲುವ ನಿಮ್ಮ ಪುರುಷನು ನಮ್ಮ ಕನ್ಯೆಯನ್ನು ದೇವತಾಸಾಕ್ಷಿಯಾಗಿ ಪಾಣಿಗ್ರಹಣ ಮಾಡಿಲ್ಲವೋ?

ಗಂ.ಕ. : ಹೌದು !

ಹೆ.ಕ. : ಆದರೆ ನಮ್ಮ ವರ್ಣಾಶ್ರಮದ ಧರ್ಮಕ್ಕನುಸಾರವಾಗಿಯೂ, ಕಾರ್ಯಕ್ರಮವಾಗಿಯೂ ನಡೆದ ಪಾಣಿಗ್ರಹಣ ಸಂಸ್ಕರಣಗಳಲ್ಲಿ ಅನೇಕ ವಿಷಯಗಳಲ್ಲಿ ತಪ್ಪು ನೆಪ್ಪುಗಳು ಕುಂದುಕೊರತೆಗಳು ಬಂದಿರಬಹುದು. ಇಂತಹ ನ್ಯೂನತೆಗಳನ್ನು ಮಹಾನುಭಾವರಾದ ಸಭಿಕರು, ಕರುಣಾಸಾಗರನಾದ ಭಗವಂತನಲ್ಲಿ ಕ್ಷಮಿಸಬೇಕೆಂದು ದೇವತಾಸಾಕ್ಷಿಯಾಗಿ ಕನ್ಯಾದಾನ ಮಾಡಿದ್ದೇವೆಯಲ್ಲವೋ?

ಗಂ.ಕ. : ಹೌದು !

ಹೆ.ಕ. : ಸ್ತ್ರೀಯರನ್ನು ಬಾಲ್ಯದಲ್ಲಿ ತಂದೆಯೂ, ಯೌವನದಲ್ಲಿ ಪತಿಯೂ, ವೃದ್ಧಾಪ್ಯದಲ್ಲಿ ಸುತರೂ, ರಕ್ಷಿಸಬೇಕೆಂಬ ಲೌಕಿಕ ಧರ್ಮಕ್ಕನುಸಾರವಾಗಿ ಕನ್ಯಾದಾನ ಮಾಡಿದ್ದಾಗಿಯೂ, ನಮ್ಮ ಪೂರ್ವ ಪದ್ದತಿ ಪ್ರಕಾರ ಹೆಣ್ಣು, ಗಂಡು ವಹಿಸಿಕೊಡುವ ಪದ್ದತಿ ಇರುವುದಲ್ಲವೊ?

ಗಂ.ಕ. : ಹೌದು.

ಹೆ.ಕ. : ನಿಮ್ಮ ದಿಬ್ಬಣಿಗರಲ್ಲಿ ಪ್ರಮುಖರಾದವರು ಮತ್ತು ಒಟ್ಟಾರೆ ಕುಲಸ್ತರು ಸೇರಿ ಏನೊಂದು ಕುಂದು ಕೊರತೆ ಇಲ್ಲದಂತೆ ನಡೆಯಿಸಿ ಕೊಡಬೇಕೆಂಬುದು ನಮ್ಮ ಅರಿಕೆಯಾಗಿದೆ. ನಮ್ಮ ಕನ್ನಿಕೆಯು ನೆತ್ತಿ ಎಣ್ಣೆ ಆರಲಿಲ್ಲ, ಅಂಗೈಗೆರೆ ಮಾಜಲಿಲ್ಲ, ಅಂಗಾಲಿಗೆ ಧೂಳು ಸೋಕಲಿಲ್ಲ. ಮೃದುವಾದ ಭಾಷೆಗಳಿಂದಲೂ ಆಟಪಾಠಗಳಿಂದಲೂ ತಂದೆ ತಾಯಿಯರ ಮನಸ್ಸನ್ನು ಸಂತೋಷಗೊಳಿಸುತ್ತಾ ಬಾಲ್ಯವಸ್ಥೆಯನ್ನು ಮೀರಿದ ನಮ್ಮ ಮುದ್ದು ಕನ್ನಿಕೆಯನ್ನು ಯಾವ ರೀತಿ ಸಾಕುವಿರಯ್ಯಾ?

ಗಂ.ಕ. : ಮೌನ!

ಹೆ.ಕ. : ನಮ್ಮ ಹೆಣ್ಣು ಮಾವನ ಗುಣವನ್ನು ಅರಿಯಳು, ಅತ್ತೆಯ ಅತಿ ಕೆಲಸವನ್ನು ತಿಳಿಯಳು, ಸಖಿಯರ ಗುಣ ದೋಷಗಳನ್ನು ಗ್ರಹಿಸಳು| ನಿರಂತರವೂ ಸೂರ್ಯನನ್ನು ಬಯಸುವ ತಾವರೆಯಂತೆಯೂ, ಚಂದ್ರನನ್ನು ನೆನೆಯುವ ನೈದಿಲೆಯಂತೆಯೂ, ಮಳೆಗಾಲವನ್ನು ಬಯಸುವ ಮತ್ಸ್ಯಕುಲದಂತೆಯೂ, ಕಾರ್ಮುಗಿಲನ್ನು ಬಯಸುವ ಬೆಳ್ಳಕ್ಕಿಯಂತೆಯೂ, ಮೇಘ ಧೂತನಿಗೆ ಆಸೆಪಟ್ಟು ಮಹಾಸಾಗರದಲ್ಲಿ ತೇಲಾಡುತ್ತಿರುವ ಹಂಸದಂತೆ ಇರುವ ನಮ್ಮ ಮುದ್ದು ಕನ್ನಿಕೆಯನ್ನು ರಕ್ಷಿಸಿಕೊಳ್ಳುವವರು ಯಾರಯ್ಯ?

ಗಂ.ಕ. : ವರನಯ್ಯಾ!

ನಮ್ಮ ಹೆಣ್ಣು ಸೂರ್ಯದೇವನಿಗೆ ಛಾಯಾದೇವಿ ಹೇಗೋ, ಚಂದ್ರನಿಗೆ ರೋಹಿಣಿದೇವಿ ಹೇಗೋ, ವಶಿಷ್ಠನಿಗೆ ಅರುಂಧತಿ ಹೇಗೋ, ಅಧಿಸೇನನಿಗೆ ಅನುಸೂಯದೇವಿ ಹೇಗೋ, ಸತ್ಯವಂತನಿಗೆ ಸಾವಿತ್ರಿದೇವಿ ಹೇಗೋ, ಶ್ರೀರಾಮ ಚಂದ್ರನಿಗೆ ಸೀತಾದೇವಿ ಹೇಗೋ ಹಾಗೆಯೇ ವಸಂತನಿಗೆ ತಂಗಾಳಿ ಬೀಸಿದಂತೆ, ಮನ್ಮಥನ ಮುಂದೆ ರತಿದೇವಿ ಸೇರಿದಂತೆ ಈ ದಂಪತಿಗಳಲ್ಲಿ ಭಿನ್ನಬೇಧಬಾರದಂತೆ ಹಿತೋಪದೇಶಗಳನ್ನು ಹೇಳಿ ಸರಿಪಡಿಸಿಕೊಳ್ಳುವವರು ಯಾರಯ್ಯ?

ಗಂ.ಕ. : ವರನ ಹಿರಿಯರು.

ಹೆ.ಕ. : ನಮ್ಮ ಹೆಣ್ಣಿಗೆ ಊಟ ಮಾಡುವುದಕ್ಕೆ ಗಂಗಳವನ್ನೂ, ಕೈ ತೊಳೆಯುವುದಕ್ಕೆ

ತಂಬಿಗೆಯನ್ನೂ, ಮಲಗುವುದಕ್ಕೆ ಯೋಗ್ಯವಾದ ರತ್ನಖಚಿತವಾದ ಮಂಚವನ್ನೂ, ಕರೆಯುವುದಕ್ಕೆ ಯೋಗ್ಯವಾದ ಗೋವಿನ ಹಿಂಡನ್ನೂ, ಉಡುಗೆ ತೊಡುಗೆಗಳನ್ನೂ ಕೊಟ್ಟುದಲ್ಲದೆ, ದ್ರವ್ಯವನ್ನು ಸಹ ಬಳುವಳಿಯಾಗಿ ಕೊಟ್ಟಿರುತ್ತೇವೆ. ಹೀಗೆ ಬಳುವಳಿಯಾಗಿ ಕೊಟ್ಟ ದ್ರವ್ಯವನ್ನು ಒಂದಕ್ಕೆ ಹತ್ತು, ಹತ್ತಕ್ಕೆ ನೂರು, ನೂರಕ್ಕೆ ಸಾವಿರಗಟ್ಟಲೆ ವೃದ್ಧಿ ಪಡಿಸಿಕೊಡುವವರು ಯಾರಯ್ಯ?

ಗಂ.ಕ. : ವರನಯ್ಯಾ.

ಹೆ.ಕ. : ಅಯ್ಯಾ ಮಹಾಶಯರೆ, ಬಾಲ್ಯಾವಸ್ಥೆಯಲ್ಲಿರುವ ನಮ್ಮ ಕನ್ನಿಕೆ ಅತ್ತೆ ಎಂಬ ಮಾತಿಗೆ ತಾಯಿ ಎಂತಲೂ, ಮಾವ ಎಂಬ ಶಬ್ದಕ್ಕೆ ತಂದೆ ಎಂತಲೂ, ಪತಿ ಎಂಬ ವಚನಕ್ಕೆ ಗತಿ ಎಂತಲೂ ತಿಳಿದಿರುವಳು. ನಾವು ಕನ್ಯಾದಾನ ಮಾಡಿದ್ದಾಗ್ಯೂ ಈ ದಂಪತಿಗಳು ಮಹಾನುಭಾವರಾದ ಸಭಿಕರ ಕರುಣಾ ಕಟಾಕ್ಷದಿಂದಲೂ, ದಯಾಸಾಗರನಾದ ಪರಮಾತ್ಮನ ಅನುಗ್ರಹದಿಂದಲೂ ಪುತ್ರ ಪೌತ್ರ ವಂಶಾಭಿವೃದ್ಧಿಯಾಗಿ ಬಾಳಲೆಂದು ಸರ್ವಸಂಪನ್ನ ಭಾಗ್ಯ ಸಮೃದ್ಧರಾಗಿಯೂ ಧೀರ್ಘಾಯುಷ್ಯವಂತರಾಗಿಯೂ ಬಾಳಲೆಂದು ಚಂದ್ರಶೇಖರನಾದ, ಶ್ರೀಅಂಬಾಧರನಾದ ಬಾಲಗಂಗಾಧರನಾದ ಪಾಲನೇತ್ರನಾದ ಶ್ರೀಪಾರ್ವತಿ ರಮಣನು ಅನುಗ್ರಹಿಸಲಿ. ಅಲ್ಲದೆ ಬೆಳಗಿನ ಜಾವದಲ್ಲಿ ಬೆಳ್ಳಕ್ಕಿಯಂತೆ ಪ್ರಕಾಶಿಸುವ ಕುಂಭಿನಿ ಕಾಂತೆಯಳಂತೆ, ಸಂಧ್ಯಾರಾಗದಂತೆ, ಬಾಲಸೂರ್ಯನಂತೆ ಹೊಳೆಯುವ ನವರತ್ನ ಕಿರೀಟಗಳಂತೆ ಪ್ರಜ್ವಲಿಸುವ ಉದಯ ಪರ್ವತವನ್ನು ಹೋಲುವ ಸಿದ್ಧಿ ವಿಘ್ನೇಶ್ವರನು ವರ ಸೌಭಾಗ್ಯವನ್ನು ದಯಪಾಲಿಸಲಿ. ಅಲ್ಲದೆ ಅಹಿಣಿ ಮಹಿಣಿಯಾದ ಮಂಗಳ ದೂರ್ಘಂಟಿಯ ದಯೆಯಿಂದ ಈ ದಂಪತಿಗಳು ಆಯುರಾರೋಗ್ಯ ಸುಖ ಸಂಪನ್ನರಾಗಿ ಬಾಳಲೆಂದು ನಾವುಗಳೆಲ್ಲರೂ ಭಗವಂತನನ್ನು ಕುರಿತು ಪ್ರಾರ್ಥಿಸೋಣ.

"ಹತ್ತು ಕುಟುಂಬ ಹದಿನೆಂಟು ಗೋತ್ರ ಕುಲಸ್ಥರ ಸಭೆ ಸಮಸ್ತರ ಸಂಗಡ ಕೇಳಿ ನವದಂಪತಿಗಳನ್ನು ದಿಬ್ಬಣದ ಮುಖ್ಯಸ್ಥರಿಗೆ ವಹಿಸಿ ಕೊಡುವಂತೇವೆ....

ಸಭಿಕರೆಲ್ಲರು: "ಒಳ್ಳೆ ಕಾರ್ಯಾವಂತೇವ್" ಎಂಬ ಘೋಷಣೆ ಕೂಗುವರು.

ವಾದ್ಯ + ಕುಣಿತ

****

# ಹೆಣ್ಣನ್ನು ಮನೆಗೆ ಹತ್ತಿಸುವಾಗ

ಶುಕ್ರವಾರದ ದಿವಸ ಹೂವ ತೋರಣ ಕಟ್ಟಿ | ದೇವರ
ಮುಂದೆ ಗುಡಿಹೊಯ್ದು ಕಲ್ಯಾಣ ಮಾಡಿ || ದೇವಿ ಬರುತಾಳೆ
ಅರಮನೆಗೆ ತಾಯವ್ವ | ಹನ್ನೆರಡು ದೀವಿಗೆ ಉರಿಯಾಲಿ ||

ಶನಿವಾರದ ದಿವಸ ಹೂವ ತೋರಣ ಕಟ್ಟಿ | ದೇವರ
ಮುಂದೆ ಗುಡಿ ಹೊಯ್ದು ಕಲ್ಯಾಣಮಾಡಿ | ದೇವಿ ಬರುತಾಳೆ
ಅರಮನೆಗೆ ತಾಯವ್ವ | ನೂರೊಂದು ದೀವಿಗೆ ಉರಿಯಾಲಿ ||

ನೂರೊಂದು ದೀವಿಗೆ ಉರಿಯಲಿ ತಾಯವ್ವಾ | ನಿಮ್ಮ ಮಗ
ಬರುತಾನೆ ಹೊಳೆದಾಟಿ | ಸುತ್ತೇಳು ಸಮುದ್ರವ ಸುತ್ತಿ
ರಾಣಿ ರಾಯರೊಳಗೊಂಡು ಬರುವಾಗ | ದೃಷ್ಟಿಗಾರತಿಯಾ ಬೆಳಗೀರೆ ||

ಅಕ್ಕಯ್ಯ ತರುತಾಳೆ ಆಯುಳ್ಳದಾರತಿಯಾ | ಆರೆಲೆ
ಕೇದಿಗೆ ಗೆರೆಮುಚ್ಚಿ ಹರಿವಾಣದೊಳಗೆ|
ದೃಷ್ಟಿಗಾರತಿಯಾ ಬೆಳಗ್ಯಾರು ||

ಅತ್ತಿಗೆ ತಂದಾರು ಚಿತ್ತಿರದಾರತಿಯಾ|
ಏಳು ಕೇದಿಗೆ ಗೆರೆಮುಚ್ಚಿ ಹರಿವಾಣದೊಳಗೆ |
ಹೂವಿನಾರತಿಯಾ ಬೆಳಗೀರೆ||

ಅಪ್ಪನ ಅರಮನೆಲಿ ತುಪ್ಪ ಬೋಜನವನುಂಡು ಮಡಿವಾಳ
ಪಟ್ಟೆ ತಂದ್ಹಾಸು ನಡೆ ಮಡಿಯಾ || ರಾಣಿ ರಾಯರೊಳಗೊಂಡು
ಬರುವಾಗ | ನಡೆವ ಕಾಲಡಿಗೆ ಮಡಿಹಾಸು ||

ಅಣ್ಣನ ಅರಮನೆಲಿ ಹಾಲುಂಡ ಮಡಿವಾಳ
ಪಟ್ಟೆ ತಂದ್ಹಾಸು ನಡೆ ಮಡಿಯಾ || ರಾಣಿ ರಾಯರೊಳಗೊಂಡು
ಬರುವಾಗ ನಡೆಮಡಿ ತಂದ್ಹಾಸು ಮಡಿವಾಳ||

ಒಳಗಿರುವ ತಾಯವ್ವಾ | ಒಳಗೇನು ಗೈದೀರಿ?
ನಿಮ್ಮ ಸೊಸೆ ಬರುತಾಳೆ ಮನೆಯೊಳಗೆ |
ನೆಲ್ಲಕ್ಕಿ ನಡುಬಾಡೆಗೆ|ಹನ್ನೆರಡು ದೀವಿಗೆ ಉರಿಯಾಲಿ....||

****

# ವಧುವರರಿಗೆ ದೃಷ್ಟಿ ತೆಗೆಯುವುದು

ಎಳ್ಳಿನ ಕಾಯಿ ಚೆಂದಾ | ಎಳ್ಳಿನ ಹೂವು ಚೆಂದಾ |
ಎಳ್ಳೊಡೆದು ಬರುವಾ ದೊರೆರಾಯಾ | ಎಳ್ಳೊಡೆದು ಬರುವಾ
ದೊರೆರಾಯ ಕುಮಾರರಿಗೆ ಕೊಡಬೇಕು ನಿಮ್ಮಾ ಮಗಳನ್ನೂ ||

ಆನೇಲಿ ಬರುವವರು ಅವರೇನು ನೋಡಲ್ಲಿ ? ಸುಂರಿ
ಸುಳಿಯಾಗೆ ಪೊಳಕುತ್ತಾ | ಸುಂರಿ ಸುಳಿಯ್ಯಾಗೆ ಪೊಳಕುತ್ತಾ
ಬಾಗುತ್ತಾ ಮುಖನೋಡಿ ಹೆಣ್ಣಾ ಕೊಡಬೇಕು ||

ಕುದುರೇಲಿ ಬರುವವರು ಅವರೇನು ನೋಡಲ್ಲಿ ?- ಬಾಳೆಯ
ಸುಳಿಯಾಗೆ ಪೊಳಕುತ್ತಾ ಬಾಳೆಯ ಸುಳಿಯಾಗೆ ಪೊಳಕುತ್ತಾ
ಬಾಗುತ್ತಾ ಮುಖನೋಡಿ ಹೆಣ್ಣಾ ಕೊಡಬೇಕು ||

ಒಂಟೇಲಿ ಬರುವವರು ಅವರೇನು ನೋಡಲ್ಲಿ ?-
ತೆಂಗಿನ ಸುಳಿಯಂತೆ ಓಲಾಡುತ್ತಾ | ತೆಂಗಿನ ಸುಳಿಯಂತೆ
ಓಲಾಡಿ ಬರುವಾಗ ರಾಯರ ಮುಖ ನೋಡಿ ಹೆಣ್ಣಾ ಕೊಡಬೇಕು ||

ಮುತ್ತಿನ ಚಪ್ಪರ | ಸುತ್ತಲು ದೀವಿಗೆ ಕನ್ಯೆ
ತಂಗ್ಯಮ್ಮಾ ಬರುತ್ತಾಳೆ | ಕನ್ಯೆ ತಂಗ್ಯಮ್ಮ ಒಳಗಿಂದಾ
ಬರುವಾಗ ಎದುರಿಗೆ ದೃಷ್ಟಿಗಾತಿಯಾ ಬೆಳಗಿರೇ ||

****



# ಬಾಗಿಲು ತಡೆದಾಗ

ಬಾಗಿಲು ತಡೆದ ತಂಗಿಗೆ ಪಟ್ಟೆ ವಸ್ತ್ರವ ಕೊಡುವೆ
ಹಸುವಿನ ಕಡಸ ಹೊಡಕೊಡುವೆ ॥

ಉದುರುವ ಮುತ್ತುಮಣಿ ಸರವ ಕೊಡುವೆ ।
ಎಲೆತಂಗಿ ನೀ ತಡೆದ ಬಾಗಿಲ ಬಿಡು ಬೇಗ॥

ಅತ್ತಿಗೆ ಹೆಣ್ಣು ಹೆತ್ತಾಗ ಸಣ್ಣಕ್ಕಿ ಬಯಲು ಬೆಳದಾಗಲೆ
ಬೆಳದಿಂಗಳ ಬಾಲೆ ಅತ್ತಿಗೆ ಹೆಣ್ಣ ಕೊಡು ನಮಗೆ॥

ಭೂತಾಯಿ ಬಸುರಾಗಿ। ಹಸುರುಡುಗೆ ಉಟ್ಟಾಗ
ಅಣ್ಣಯ್ಯ ಮೊಸರನ್ನ ತಂದಾಗ ಅತ್ತಿಗೆ॥

ಬಾಗಿಲು ತಡೆದ ತಂಗಿಗೆ ಪಟ್ಟೆ ವಸ್ತ್ರವ ಕೊಡುವೆ
ಎಲೆ ತಂಗಿ ನೀ ತಡೆದ ಬಾಗಿಲ ಬಿಡು ಬೇಗ ॥

****

ರಂಗನ ಮಣಯೆ ರಂಗ ಬಂದಾ | ಬಿಡಿರೆ ಬಾಗಿಲಾ
ತೆಗೆಯಿರಿ ಕದಗಳಾ | ರಂಗ ರುಕ್ಮಣಿ ಬಂದಾಗಾಯ್ತು |
ಬಿಡಿರೆ ಬಾಗಿಲಾ ತೆಗೆಯಿರಿ ಕದಗಳಾ ||

ತಂದೆ ತಾಯರ ಬಿಟ್ಟು ಬಂದೆ|
ಅಣ್ಣ ತಮ್ಮಂದಿರಾ ಆಟ ಬಿಟ್ಟು ಬಂದೆನಾ ಬಿಡಿರೆಬಾಗಿಲಾ|
ಅಕ್ಕತಂಗಿಯರ ಕೂಟ ಬಿಟ್ಟು ಬಂದೆ||

ಬಂದೆ ನಾ ಬಿಡಿರಿ ಬಾಗಿಲಾ ತೆಗೆಯಿರಿ ಕದಗಳಾ|
ರಂಗ ರುಕ್ಮಿಣಿ ಬಂದಾಗಾಯ್ತು ಬಿಡಿರಿ ಬಾಗಿಲಾ ||
ಬಿಡಿರೆ ಬಾಗಿಲಾ ತೆಗೆಯಿರಿ ಕದಗಳಾ ||

ಅತ್ತೆ ಮಾವರ ಗುಣ ಕಂಡು | ಬಾವ ಮೈದುನರ
ಆಟ ಕಂಡು | ಅತ್ತಿಗೆ ನಾದಿನಿಯರ ಹಿತ ಕಂಡು |
ಬಂದೆ ನಾ ಬಿಡಿರಿ ಬಾಗಿಲಾ ತೆಗೆಯಿರಿ ಕದಗಳಾ ||

# ಬಾಗಿಲ ತಡೆಯುವ ಹಾಡುಗಳು

ಅಂದು ಗೋಕುಲದಿಂದಾ ಬಂದ ನಾರಾಯಣ ಕೃಷ್ಣಾ |
ಮಂಟಪದ ನಡುಗಾಗಿ ಬರುವ ಹಾಗೆನ್ನಣ್ಣ ಯ್ಯಾ |
ಮಡದಿ ಬೆಡಗೆಂದು ಬರುತ್ತಾರೆ||

ಮಡದಿ ಬೆಡಗೆಂದು ಬರುವಾಗ ಅಣ್ಣ ಯ್ಯಾ |
ತಂಗಿಯು ಕದಗಳಾ ತಡೆದಾಳು| ತಂಗ್ಯಮ್ಮ
ನೀ-ತಡೆದ ಕದವಾ ಬಿಡುಬೇಗಾ ||

ನಾ ತಡೆದ ಕದವಾ ಬಿಡಲಾರೆ| ಪ್ರತಿಯೊಂದು ಮಾತು ನುಡಿಬೇಗಾ ||
ದೇಶ ಉಂಬಳಿ ಕೊಡುವೆ| ಶೇಷ ಉಪ್ಪರಿಗೆ ಕೊಡುವೆ
ನೀ ತಡೆದ ಕದಗಳಾ ಬಿಡು ಬೇಗ ||

ದೇಶ ಉಂಬಳಿ ನನಗುಂಟು | ಶೇಷ ಉಪ್ಪರಿಗೆ ನನಗುಂಟು |
ಎನ್ನುವ ನೀ ನನಗೆ ಕೊಡುವೆನ್ನಮ್ಮಾ |
ಪ್ರೀತಿಗೊಂದು ಮಾತು ನುಡಿಬೇಗಾ ||

****

ಮಾವಿನ ತೋರಣಕಾಗಿ | ಬಂದ ಗಂಡನ ತಂಗಿ |
ತೆಂಗು ಬಾಳೆಯಾ ಅಡಕೆಯಾ || ವನಕಾಗಿ
ಬಂದು ಬಾಗಿಲನು ತಡೆದಾಳು ||

ಜಗಲೀಲಿ ನಿಂದು | ಹತ್ತು ಬೆರಳು ನೊಂದಾವು |
ನೆತ್ತಿ ಯಾ ದಂಡೆ ಜರಿದಾವು || ತಂಗ್ಯಮ್ಮಾ ನೀ
ತಡೆದಾ ಬಾಗಿಲನು ಬಿಡು ನಮಗೆ||

ಆನೆಗಾನೆ ಕೊಡುವೆ | ಆನೆ ಮರಿಗಳ ಕೊಡುವೇ
ಕಂಠೀಸರ ಕೊಡುವೆ ಕೊರಳಿಗೆ || ತಂಗ್ಯಮ್ಮಾ ನೀ
ತಡೆದಾ ಬಾಗಿಲನು ಬಿಡುನಮಗೆ ||

ಆನೆಗಳು ನಮಗುಂಟು | ಆನೆ ಮರಿಗಳುಂಟು
ಕಂಠೀಸರವುಂಟು ಕೊರಳಿಗೆ ಅಣ್ಣಯ್ಯ || ನಾ
ತಡೆದಾ ಬಾಗಿಲ ಬಿಡಲಾರೆ||

ಕಲ್ಮೇಲೆ ಕಲ್ಲೊಡ್ಡಿ ಹೂವ ಬಿಡಿಸುವ ಜಾಣೆ|
ತಂಗ್ಯಮ್ಮ ಬಾಗಿಲ ಬಿಡಲಾರಳು || ಅವಳೊಂದು
ಮಾತಿಗೆ ಬಾಗಿಲ ತಡೆದವಳೆ||

ಅತ್ತಿಗೆ ಅತ್ತಿಗೆ| ಅಡಿಕೆ ಜೂಜಾಡೊವೆರಡು|
ಮುತ್ತೀನ ಜೂಜು ಸರಜೂಜು || ಅತ್ತಿಗೆ
ಹೆತ್ತ ಹೆಣ್ಣಾ ಜೂಜು ಮಗನೀಗೆ ||

ನಾನು ಹೆಣ್ಹೆತ್ತಾಗ| ನೀನು ಗಂಡ್ಹೆತ್ತಾಗ|
ಸಣ್ಣಕ್ಕಿ ಬಯಲು ಬೆಳೆದಾಗ ನಾದುನಿ
ಮಾಡಿಕೊಳ್ಳೋಣ ಮದುವೇಯಾ ||

ಶ್ರೀ ಗಿರಿ ಪರ್ವತಕೆ ಹೋದೋದೊಂದುಂಟಾದ್ರೆ|
ಶಿವನ ದಯದಿಂದಾ ಮಗನಾದ್ರೆ || ನಾದುನಿ
ಮಗನಿಗೆ ಧಾರೆ ಎರೆವೇನು ||

ಮನೆಯಾ ಮುಂದಿರುವಾ | ಹೊನ್ನರಳಿಮರವೆ |
ಅಣ್ಣಾನ ಮನೆಗೆ ಹೆಣ್ಣಿಗೆ ಬರುತ್ತೇನೆ| ಅತ್ತಿಗಮ್ಮಾ
ನಿನ್ನ ಸಾಕ್ಷಿಯಾಗಿ ಬಾಗೀಲ ಬಿಡುತೇನೆ ಅತ್ತಿಗಮ್ಮಾ
ಬಾಗಿಲ ದಾಟಿ ಒಳಗ್ಹೋಗು||

****



# ಶ್ರೀಕೃಷ್ಣ ಸುಭದ್ರೆಯರ ಸಂವಾದ



ರಂಗನ ಪರಿಣಯ ಐದನೆ ದಿವಸದಿ
ಮಂಗಳೋಕುಳಿಯನಾಡಿ | ಭೂಸುರರಂತ ರಂಗ ದೀಪ್ಪವ ನೀಡಿ |
ವಿನೋದ ದೋಳಂಗನೆಯೊಡಗೂಡಿ | ಬರುತಿರಲು ನೋಡಿ ಅಂಗಜನ
ಮದದಾನೆಯಂದದೀ ಅಂಗನೆಯರ ಸಮ್ಮೇಳನದಿಂದಲಿ |
ಅಂಗನಾಮಣಿ ರುಕ್ಮಿಣಿ ರೂಪಿಣಿ ರಂಗನಾಥನ ತಡೆದು
ದ್ವಾರದಿ | ತಂಗಿ ಸುಭದ್ರೆ ನುಡಿದಾಳು | ಸೋಬಾನೆ ||

ಸುಭದ್ರೆ : ವಲ್ಲಭೆಯನು ಕರಕೊಂಡು ಎಲ್ಲಿಗಣ್ಣಯ್ಯಾ | ವಿನೋದದಿ
ಎಲ್ಲಿಗೆ ಗಮನವಿದು ಅಣ್ಣಯ್ಯ ಕೇಳ್ | ನಿಲ್ಲೊಂದು
ಮಾತುಂಟೆಂದು ಈ ಲೋಕಕೆ ಒಡೆಯಾ ಲಕ್ಷ್ಮೀ ವಲ್ಲಭನೆ ||
ನೀನೊಲಿದು ಕಮಕೃಪೆಯಲಿ ಎನಗಿಷ್ಟವನು ಈಕ್ಷಣದಲಿ
ಪಾಲಿಸುವ ತನಕ ಕದಬಿಡೆ || ದಯೆ ಮಾಡಣ್ಣಯ್ಯ ಶ್ರೀಕೃಷ್ಣಯ್ಯಾ || ಸೋ ||

ಕೃಷ್ಣ : ಆ ಕಮಲಾಕ್ಷಿಯರುಗಳ ಸಮ್ಮೇಳದಿರಿರೆಂದು ಮುಖಿಯೇ
ನೀನು ದ್ವಾರದೊಳಿನ್ನ ಯಾಕಪ್ಪಾ ತಡೆದೆ ? ನೀ ಬೇಡಿಕೋ
ಬೇಕಾದ ಬಯಕೆಗಳನು ನೀ ಪೇಳಿದುದನು ಈರೇಳು
ಲೋಕದೊಳಿದ್ದರು ನಾ ತರಿಸಿ ಕೊಡುವೆನು.. ಈ ಕ್ಷಣಾ ||
ಕೋಕಿಲಾ ಸ್ವರ ಕಂಬುಕಂದರೆ ಪಾಕಶಾಸನ ಸುತನ ಪ್ರಿಯಳೇ
ಕದಬಿಡೆ ತಂಗಿ ಮೋಹನಾಂಗೀ || ಸೋಬಾನೆ ||

ಸುಭದ್ರೆ : ಲೋಕನಾಯಕನೆ ನಿನ್ನಾ ಉದರದಿ ಜನಿಸಿದ ಲೋಕಯೀರೇಳಲಿ
ನೀನರಿಯದ ಲೋಕ ಪ್ರಪಂಚದಲಿ ಯಾವುದು ಸಾಕಿನ್ನೊಳೆ ಮಾತ
ತಿಳಿದವನು ನೀನು | ಲೋಕ ಬಾಧಕರಾದ ದುರುಳ ರಕ್ಕಸರನ್ನು
ಸಂಹರಿಸಿ | ಲಗ್ನದಿ ಆಕರಿಸಿ ಬರುವಾಗ ತಡೆದಾ ವಿವೇಕ
ಮನದೊಳಗಿರಿತು | ಈ ಕ್ಷಣ ದಯ ಮಾಡಣ್ಣಯ್ಯಾ ಶ್ರೀಕೃಷ್ಣಯ್ಯಾ ||
ಸೋಬಾನೆ ||

ಕೃಷ್ಣ : ಪನ್ನಗವೇಣಿ ಕಾಲಂದುಗೆ ಕಿರುಗೆಜ್ಜೆ ಹೊನ್ನ ಕಾಲುಂಗುರವನು
ಸಣ್ಣ ನಡುವಿನ ಹೊನ್ನಿನೊಡ್ಯಾಣವನು ಜೋಡಾಗಿಹ ರನ್ನದ
ನೇವಳವನು | ಸರಪಣಿಯನು ಚಿನ್ನದುಂಗುರ ದೋರ
ಚಳಕಿ ಸುವರ್ಣ ಕಡಗವು | ವಂಕಿ ಹಿಂಬಳೆಯನು
ನಾ ನಿನಗೆ ಕೊಡುವೆನು ಸುಗುಣೆ ಕೇಳೆಲೆ ||
ತಡೆಯದೆ ಈ ಕ್ಷಣ ಕದಬಿಡೆ ತಂಗಿ ಮೋಹನಾಂಗಿ || ಸೋಬಾನೆ||

ಸುಭದ್ರೆ : ಪನ್ನಗಶಯನ ಕಾಲುಂದುಗೆ ಕಿರುಗೆಜ್ಜೆ ಹೊನ್ನ ಕಾಲುಂಗುರವನು
ಸಣ್ಣ ನಡುವಿನ ಹೊನ್ನಿನೊಡ್ಯಾಣವನು | ಜೋಡಾಗಿಹ ರನ್ನದ
ನೇವಳವನು ಸರಪಳಿಯನು ಚಿನ್ನದುಂಗುರ ದೋರ ಚಳಿಕಿ
ಸುವರ್ಣ ಕಡಗವು ವಂಕಿ ಹಿಂಬಳೆಯನು ಎನಗೆ | ಎನ್ನಪ್ಪ
ಕೊಡುವರೂ ಹರುಷದಿಂದಲಿ ಮನ್ಮನೋರಥ ದಯ
ಮಾಡಣ್ಣಯ್ಯಾ ಶ್ರೀಕೃಷ್ಣಯ್ಯಾ || ಸೋಬಾನೆ ||

ಕೃಷ್ಣ : ಪನ್ನಗಶಯನ ಕಾಲಂದುಗೆ ಕಿರುಗೆಜ್ಜೆ ಹೊನ್ನ ಕಾಲುಂಗುರವನು|
ಸಣ್ಣ ನಡುವಿನ ಹೊನ್ನಿನೊಡ್ಯಾಣವನು ಜೋಡಾಗಿಹ ರನ್ನದ
ನೇವಳವನು | ಸರಪಣಿಯನು ಚಿನ್ನದುಂಗುರ ದೋರ
ಚಳಕಿ ಸುವರ್ಣ ಕಡಗವು | ವಂಕಿ ಹಿಂಬಳೆಯನು
ನಾನಿನಗೆ ಕೊಡುವೆನು || ಸುಗುಣೆ ಕೇಳೆಲೆ ||
ತಡೆಯದೆ ಈ ಕ್ಷಣ ಕದಬಿಡೆ ತಂಗಿ ಮೋಹನಾಂಗಿ || ಸೋಬಾನೆ||

ಸುಭದ್ರೆ : ಪನ್ನಗಶಯನ ಕಾಲಂದುಗೆ ಕಿರುಗೆಜ್ಜೆ ಹೊನ್ನ ಕಾಲುಂಗುರವನು|
ಸಣ್ಣ ನಡುವಿನ ಹೊನ್ನಿನೊಡ್ಯಾಣವನು| ಜೋಡಾಗಿಹ ರನ್ನದನೇವಳವನು|
ಸರಪಣಿಯನು -ಚಿನ್ನದುಂಗುರ ದೋರ-ಚಳಕಿ ಸುವರ್ಣ ಕಡಗವು|
ವಂಕಿ ಹಿಂಬಳೆಯನು ಎನಗೆ ಎನ್ನಪ್ಪ ಕೊಡುವರೂ |
ಹರುಷದಿಂದಲಿ ಮನ್ಮನೋರಥ ದಯ ಮಾಡಣ್ಣಯ್ಯಾ
ಶ್ರೀಕೃಷ್ಣಯ್ಯಾ||ಸೋಬಾನೆ||

ಕೃಷ್ಣ : ಚಿತ್ತದಿ ಅರಗಿಣಿ ನೀ ಕೇಳು ಕಠಾಣಿ ಮುತ್ತಿನ ಸರಗಳನೂ|
ಶೋಭಿಪ ನವರತ್ನದ ಮಾಲೆಯನು ಮೇಲೊಪ್ಪುವ ಕೆತ್ತಿಗೆಯ
ಪದಕವನು | ಏಕಾವಳಿಯನು ಪುತ್ಥಳಿ ಸರಮಾಲೆ
ಸರಪಳಿ ಕೆತ್ತಿಗೆಯ ಮೂಗುತಿಯನು |ಸರಸಿಜ ನೇತ್ರ

ನಾ ನಿನಿಗೀಗ ಕೊಡುವೆನು ತರುಣಿ ರನ್ನಳೆ ಕ್ಷೀರ ಭಾಷಿಣಿ
ಕದಬಿಡೆ ತಂಗೀ ಮೋಹನಾಂಗೀ... ||ಸೋಬಾನೆ||

ಸುಭದ್ರೆ : ಚಿತ್ತ ಜನಕನೇ-ನೀ ಕೇಳು ಕಲ್ಯಾಣಿ ಮುತ್ತಿನ ಸರಗಳನು
ಶೋಭಿಪ ನವರತ್ನದ ಮಾಲೆಯನು ಮೇಲೊಪ್ಪುವ ಕೆತ್ತಿಗೆ
ಪದಕವನು ಏಕಾವಳಿಯನು ಪುತ್ಥಳಿ ಸರಮಾಲೆ ಸರಪಳಿ
ಕೆತ್ತಿಗೆಯ ಮೂಗುತಿಯನು ಸರಸಿ ನೇತ್ರಯನಗೆ ಎನ್ನಪ್ಪ
ಕೊಡುವರು| ಹರುಷದಿಂದಲಿ ಮನೋರಥ ದಯಮಾಡಣ್ಣಯ್ಯ
ಶ್ರೀ ಕೃಷ್ಣಯ್ಯಾ||ಸೋಬಾನೆ||

ಕೃಷ್ಣ : ಸರಸಿಜಾಂಬಕೆ ಕೇಳು - ಕರು ಎಮ್ಮೆ ಗೋವ್ಗಳು ತುರು
ಗಾವಲರುಗಳು | ನಾವಾಳುವ ಸರಿಯರ್ಧ ದರಣಿಯೊಳು
ನೂತನವಾದವರ ಪೀತವಸನಂಗಳು ಪಯವಾರಣಗಳು
ಮೆರೆವ ದಾಸಿಯರುಗಳ ಗಡಣದಿ ಪರಮ ದ್ರವ್ಯ ಗಳುಂಟು ಕಿವಿ
ಕೊಪ್ಪರಿಗೆ ಸಾವಿರವೀಗ ಕೊಡುವೆನು | ತರುಣಿ ರನ್ನಳೇ ಕ್ಷೀರ
ಭಾಷಿಣಿ ಕದಬಿಡೆ ತಂಗೀ ಮೋಹನಾಂಗಿ||ಸೋಬಾನೆ||

ಸುಭದ್ರೆ : ಸರಸಿ ಜಾಂಬಕ ಕೇಳು | ಕರು ಎಮ್ಮೆ ಗೋವ್ಗಳು ತುರು
ಗಾವಲರುಗಳು | ನಾವಾಳುವ ಸರಿಯರ್ಧ ಧರಣಿಯೊಳು
ನೂತನವಾದ ವರಪೀತ ವಸನಂಗಳು ಪಯವಾರಣಂಗಳು
ಮೆರೆವದಾಸಿಯರುಗಳ ಗಡಣದಿ ಪರಮ ದ್ರವ್ಯಗಳುಂಟು
ಕಿವಿ ಕೊಪ್ಪರಿಗೆ ಸಹ ಹಿರಿಯಣ್ಣ ಕೊಡುವನು | ಹರುಷದಿಂದಲಿ
ಮನೋರಥ ದಯಮಾಡಣ್ಣಯ್ಯಾ ಶ್ರೀ ಕೃಷ್ಣಯ್ಯಾ ||ಸೋಬಾನೆ||

ಕೃಷ್ಣ : ಏನ ಹೇಳಿದರೂ ಸಮ್ಮತವಿಲ್ಲಾ ನಿನಗೆ ಮತ್ತೇನುಂಟು
ಮನಸಿನೊಳು | ನಿನ್ನಯ ಗುಟ್ಟೆನ್ನಾಣೆ ಹೇಳಲೆಮ್ಮೊಳು
ನಿನಗೆ ಅನುಮಾನವಿಲ್ಲದೆ| ಎನ್ನೊಳು ಈ ಸಭೆಯೊಳು
ಸಾನುರಾಗದಿ| ನೀನು ಬೇಡಿಕೋ ಮಾನಿನೀಯರ ಕುಲ ಶಿರೋಮಣಿ
ಜಾಣೆ ಮನ್ಮಥನಾಣೆ ಸರಸ ಪ್ರವೀಣೆ | ಗುಣ ನಿಧಾನೆ ಬೇಗದಿ
ಕದಬಿಡೆ ಮೋಹನಾಂಗೀ...||ಸೋಬಾನೆ||

ಸುಭದ್ರೆ : ಕಡಲಶಯನ ನಿನ್ನ ಮಗಳೆನ್ನ ಮಗನಿಗೆ ಕೊಡಬೇಕೆನುತ |
ನಾನು ಈ ಸಮಯದಿ ತಡೆದಿಹೆ ಬಾಗಿಲನು || ವೀಳ್ಯವನ್ನಿತ್ತು
ಕೊಡಿಸೆನಗೆ ಅಭಯವನು ನಿನ್ನಾತ್ಮ ಜೆಯನು |
ಕೊಡು ಎನ್ನಯ್ಯ ಕುವರೆನುತಲಿ ದೃಢದಿ ಭಾಷೆಯ ನಿತ್ತ ರೀಕ್ಷಣ

ಬಿಡುವೆ ನಾ ತಡೆದಿಹ ಕವಾಟವ| ತಡೆದೀಕ್ಷಣ ದಾನವಾಂತಕ
ದಯ ಮಾಡಣ್ಣಯ್ಯ | ಶ್ರೀ ಕೃಷ್ಣಯ್ಯಾ||ಸೋಬಾನೆ||

ಕೃಷ್ಣ : ನಂದ ನಂದನ ಚೆಲ್ವ ಕುಂದನ ವದನೆ ಪೂರ್ಣ|
ಚಂದಿರ ಮುಖಿಯೇ ಕೇಳು | ನಾ ಬಯಸುವೆ ಕಂದೆನೆಗೆ
ಮೊದಲು ಚೊಚ್ಚಲ ಮಗಳೆಂದು ನೀವರೆದೆನ್ನಳು| ಈ ಸಭೆಯೊಳು
ಹಿಂದೆ ಮಾಡಿದ ಸುಕೃತವೆಂತಿಹದೆಂದು| ಕಂಡವರಾರು
ಲೋಕದಿ ಕಂದ ಮೊದಲೆನಗಾದರಕೇನೆಂದು | ವರ್ಣಿಸು
ಕಂಬು ಕಂಟಿಣೆ ಕದಬಿಡೆ ತಂಗೀ ಮೋಹನಾಂಗೀ||ಸೋಬಾನೆ||

ಸುಭದ್ರೆ : ಗಂಡು ಮಗನುದಿಸಿದರೆ ಮಾಂಡಲಿಕರ ಗಂಡಾಗಿ ||
ತೇಜದಲಿ ಆಳಿರಲಿ ಭೂಮಂಡಲ ಸೌಖ್ಯದಲಿ|
ಕೀರ್ತಿಯನೊಡಗೊಂಡು ವಿನೋದದಿಂದಲಿ ಹೆಣ್ಣಾದರೆನ್ನ
ಚಂಡ-ವಿಕ್ರಮ ಕುವರಗೆನುತಲಿ|
ಪುಂಡರೀಕ ದಳನಯನ ಜಗದುದ್ದಂಡ
ಮೂರುತಿ ಈಶ ಶಖಿ ಮಾರ್ತಂಡ ಶತಕೋಟಿ ಪ್ರಕಾಶನೇ|
ದಯೆ ಮಾಡಣ್ಣಯ್ಯಾ ಶ್ರೀ ಕೃಷ್ಣಯ್ಯಾ ||ಸೋಬಾನೆ||

ಕೃಷ್ಣ : ಮತ್ತೊಂದು ಮಾತುಂಟು ನೀಕೇಳು ಸೌಭದ್ರೆ | ಅತ್ತಿಗೆಯೊಡನೆ
ನೀನು| ನಾಳೆಗೆ ಬದಲುತ್ತರ ಬರುವುದನು| ಈ ಹೊತ್ತೆ ನಿವೃತ್ತಿಯ
ಮಾಡದನು | ಜನರಿದಿರೊಳಿನ್ನು ಮತ್ತೆ ನೀ ನುಡಿಗೆ| ನುಡಿದಂತೆ
ಭಾಷೆಗೆ ವೀಳ್ಯವನ್ನಿತ್ತು ಕೊಡಿಸುವ ಮತ್ತ ಕಾಶಿನಿ ಮಂದಗಾಮಿನಿ
ವೃತ್ತ ಕುಚೆ| ನೀನು ದಯವಿಡೆ ಕದಬಿಡೆ ತಂಗಿ ಮೋಹನಾಂಗೀ
||ಸೋಬಾನೆ||

ಸುಭದ್ರೆ : ಜಾಣೆಯರಸಿ ಎನ್ನಣ್ಣನ ಪಟ್ಟದ ರಾಣಿ ಕಲಾಪಿ ವೇಣಿ
ಸುಲಲಿತ ಗುಣಶೇಣಿ ಪರಮ ಕಲ್ಯಾಣಿ ಸ್ತ್ರೀಯರೊಳು
ಕಠಾಣೆ ಕಲಕೀರವಾಣಿ ಶತಚಕ್ರಪಾಣಿ| ಮೀನಕೇತನ
ಪಿತಗೆ ಕಳುಹಿಸಿ ತಾನು ಲೇಖನ ಬರೆದು ಅಣ್ಣನ ಮಾನ
ಭಂಗಿಸಿ ಓಡಿ ಬಂದಾ ಪ್ರವೀಣೆ ಗುಣನಿಧಾನೆ ಬೇಗದಿ
ಬಿಡೆ ನಿನ್ನಾ ಮಗಳಾ ಕೊಡಬೇಕು ||ಸೋಬಾನೆ||

ಸೊಸೋಪಮ ಪಾಣೆ| ಕಲಕೀರ ಭಾಷಣೆ ನಾನಾ ಬಿಸಮ
ಗಂಬೀರೆ...

*ಮಾತಿನೊಳತಿ ಶೂರೆ....ನಿನಗೆ ಭಾಪುರೆ| ಎನಗಿಷ್ಟು ಉಪಚಾರ ಮಾಡದಿರೆ*
*ನೀರೆ ಸರಸವಯ್ಯಾರೆ| ಚಾರುತನದಿ ಸನ್ಯಾಸಿ ವೇಷದಿ ಚೋರತನದಲಿ*
*ಸೇರಿದವನೊಳು | ಧೀರ ಹಿರಿಯಣ್ಣನಿಗೆ ವಂಚಿಸಿ ಜಾರಿ ಬಂದಾ*
*....ಮಹಾನು ...ಭಾವಳೆ| ಕರೆ ತಾರೆ ನಿನ್ನಾ ಕುವರನ್ನಾ...|*
*ನೂತನಗಾರ್ತಿ ಕೇಳ್.... ಮಾತಿಗೆ ಮಾತುಂಟು*
*ಯಾತಕೀ ಮಾತುಗಳು ತೋರಿಕೆ| ಜಗನ್ಮಾತೆ ನಿನ್ನಯ*
*ಮಗಳು | ನಲಿ ನಲಿದೆನ್ನನು ಜಾತನು ಎದುರಿನೊಳು*
*ಬರುವ| ನೀಕೇಳು, ಮಾತು ನಿಶ್ಚಯವೆಂದು ಅತಿ*
*ಸಂಪ್ರೀತಿಯಲಿ ವೀಳ್ಯವನು ಭೀಷ್ಮಕಜಾತೆ ಮೂಜಗ*
*ಮಾತೆ ಸರಸ ವಿಖ್ಯಾತ ಅಣ್ಣನ ಪ್ರೀತೆ ರುಕ್ಮಿಣಿ|*
*ಬಿಡೆ ನಿನ್ನ ಮಗಳಾ ಕೊಡಬೇಕು....|*

ಕೃಷ್ಣ : *ಮಂದ ಹಾಸದೊಳರವಿಂದ ಲೋಚನೆಯುವಿಂದ ಲೋಚನೆ*
*ಯರಿಗೆಂದು| ಮಾತಿಗೆ ಮಾತನು ಆಡುತ ನಗುತೆಂದು*
*ಚಿನ್ಮಯರೂಪನು ಒಡಂಬಡಿಸಿ...| ಆನಂದದೊಳರಿಸಿಯನು*
*ಸೌಭದ್ರೆಯನು ಎಂದು | ವಿನಯೋಕ್ತವನು ಪೇಳುತ...*
*ಇಂದು ಮುಖಿಯೆ ಕೇಳು, ನಿನ್ನಯ ಕಂದಗೆನ್ನಯ*
*ಕುವರಿಯನು ಕೊಡುವೆನು ಎಂದು ವೀಳ್ಯವನೀಯ ಲಾಕ್ಷಣ*
*ಲಾಕ್ಷಣ ಬಾಲೆ ಸಾರಿದಳು ಸಭೆಯೊಳು ||*
*ಪೌರೋಹಿತ್ಯರಿಗೆ ಸಾಕ್ಷಿಯನಿಟ್ಟು ಮುತ್ತಿನ ದ್ವಾರ*
*ಬಿಟ್ಟಳು ನಗುತ ಹರುಷದಿ ತನ್ನ ನಾರಿ ರುಕ್ಮಿಣಿ*
*ಸಹಿತ ಮನಸಿಜನಪಿತ....ಭೂರಮಣ...ಭೀಷ್ಮನ*
*ವರ ಕುಮಾರಿ ಸಹ ಒಪ್ಪಿರಲು ಹಸೆಯಲಿ...|*
*ಚಾರು ತರುಣಾಕರನ ಮಕುಟದಿ ಭೂರಿ ಸಂತೈಸಿದರು.*
*ಗಗನದಿ ನಾರಿಯರು ಸೇಸೆ ತಳಿದರು... ಸೋಬಾನೆ||*
*ಮಂಗಳಂ ಯದುಕುಲ ತಿಲಕ ಗೋಪಾಲಗೆ...|*
*ಮಾಧವಗೆ....ಮತ್ಸ್ಯಗೆ ಜಯಮಂಗಳಂ...ಕೂರ್ಮನಿಗೆ*
*ವರಾಹಗೆ ಶುಭಮಂಗಳಂ | ನರಸಿಂಹಗೆ.... ವಾಮನಸ ತಾರೆಗೆ*
*ಮಂಗಳಂ ... ಶ್ರೀ ಪರಶುರಾಮಗೆ ಮಂಗಳಂ ||*
*ಶ್ರೀರಾಮ ಕೃಷ್ಣಗೆ ಮಂಗಳಂ | ಶ್ರೀ ಬೌದ್ಧ ಕಲ್ಕಿಗೆ ಮಂಗಳಂ ||*
*ಶ್ರೀಕೃಷ್ಣರಾಯಗೆ ಮಂಗಳಾರತಿಯಾ ಬೆಳ....ಗೀರೆ... ಸೋಬಾನೆ ||*

# ನೀರು ಮದುವೆ

ಬಾಗಿಲು ತಡೆದವರು । ಬಂಗಾರದ ಮುಖದವರು
ನೀವು ತಡೆದ ಬಾಗಿಲ ಬಿಡಿ ಬೇಗ ॥

ಕರೆಯಲು ಹಸು ಕೊಡುವೆ ಹಸುವಿನ ಕರುಕೊಡುವೆ
ತಡೆದ ಬಾಗಿಲ ಬಿಡಿ ಬೇಗ ॥

ಓಲೆಗೆ ಚಿನ್ನ ಕೊಡುವೆ । ಕೊರಳಿಗೆ ಮುತ್ತು ಸರವ
ತಡೆದ ಬಾಗಿಲ ಬಿಡಿಬೇಗ ॥

ನೋಡಿ ರಂಗಗಾಳಿ । ಮಾಣಿಕದ ಚೆಂದಗಾಳಿ
ಅದಕೊಂದು ಉತ್ತರ ಮಾವಯ್ಯ ಹೇಳಿರಿ ॥

ಬಾಗಿಲಲಿ ನಿಂತು ಬೆರಳೆಲ್ಲ ನೊಂದಾವು॥
ಅತ್ತೆಯವರೆ ಬಿಂದಿಗೆ ಭಾರ ತಡಿಲಾರೆ॥

ಬಾಗಿಲ ತಡೆದವರು ಬಂಗಾರದ ಮುಖದವರು
ನೀವು ತಡೆದ ಬಾಗಿಲ ಬಿಡಿ ಬೇಗ॥

****



# ನೀರು ಮದುವೆಗೆ ಬಂದ ತವರಿನವರು ಹೇಳುವ ಹಾಡು

ಚಿನ್ನದುಂಗುರ ನಿನಗೆ, ಮತ್ತಷ್ಟು ಭಾಗ್ಯವು ನಿನಗೆ
ಚಿನ್ನದ ಉಪ್ಪರಿಗೆ ಮನೆ ನಿನಗೆ ಎಲೆ ಮಗಳೆ ॥

ಚಿನ್ನದ ಉಪ್ಪರಿಗೆ ಮನೆ ನಿನಗೆ ಎಲೆ ಮಗಳೇ
ಉಪ್ಪರಿಗೆ ಮನೆಯಲ್ಲಿ ಗಿಲಿಗಿಲಿ ಕಾಲ್‌ಗೆಜ್ಜೆ ॥

ಚಿನ್ನಾದುಂಗುರಕೆ ಎಲ್ಲ ಭಾಗ್ಯವು ಬರಲಿ
ಉಪ್ಪರಿಗೆ ಮನೆಯಲ್ಲಿ ಕೊಪ್ಪರಿಗೆ ಹಣನೋಡಿ ॥

ಅಳಿಯ ರಂಗಯ್ಯನ ಗುಣ ಕಂಡು ಮಗಳನ್ನು
ಉಪ್ಪರಿಗೆ ಮನೆಗೆ ಧಾರೆ ಎರೆದೇವು ॥

ಹಾಸುವ ಹಾಸಿಗೆ ಕಂಡು । ತೂಗುವ ಮಂಚವ ಕಂಡು
ಮೇಲಾಗಿ ಮಗಳಾ ಸುಖ ಕಂಡು ॥

ಅಳಿಯ ರಂಗಯ್ಯನ ಗುಣಕಂಡು
ಉಪ್ಪರಿಗೆ ಮನೆಗೆ ಧಾರೆ ಎರೆದೇವು ॥ ಚಿನ್ನ ॥

****



# ಸಟುಗದ ಹಣ ಕೇಳುವಾಗ (ನೀರು ಮದುವೆ)

ದೇವ ಬನಕೆ ಹೋಗಿ ದೇವ ಬಾಳೆಲೆ ತಂದೂ|
ದೇವ ಪುರುಷರಿಗೆ ಹಾಲು ಬೋನ ಎಡೆಮಾಡಿ|
ಉಕ್ಕಿನಾ ಕಂಬಾ ಮರೆಮಾಡಿ ಕೇಳಿದಳು| ಹೋಗಿ ಬರುತ್ತೇನೆ ತವರಿಗೆ||
ಚಂದ್ರ ಬನಕೆ ಹೋಗಿ ಚಂದ್ರ ಬಾಳೆಲೆ ತಂದು
ದೇವ ಪುರುಷರಿಗೆ ತುಪ್ಪ ಬೋನ ಎಡೆಮಾಡಿ|
ಉಕ್ಕಿನಾ ಕಂಬಾ ಮರೆಮಾಡಿ ಕೇಳಿದಳು| ಹೋಗಿ ಬರುತ್ತೇನೆ ತವರಿಗೆ||

ಹಾಲು ಕಾಯುವ ಮೊದಲು ಬೋನ ಬೇಯುವ
ಮೊದಲು ಹೋಗಿ ಬಾ ನಿನ್ನ ತವರೀಗೆ||
ಎರಡೆಲೆ ಒಂದಡಿಕೆ ಸಟುಗದ ಮೇಲಿರಿಸಿ|
ಹನ್ನೆರಡು ವರಹಗಳ ಬೇಡಿ ನಿಂತಳು ಅವಳೂ... |
ಕೊಟ್ಟು ಕಳಿಸಣ್ಣಾ ಅವಳನ್ನು || ನಿಲಿಸದಿರಣ್ಣಯ್ಯಾ ಸಭೆಮುಂದೆ||
ಕೊಟ್ಟು ಕಳಿಸಣ್ಣಾ ಸಭೆ ಮುಂದೆ| ನಿಲಿಸದಿರಣ್ಣಯ್ಯ ಅವಳನ್ನೂ... ||

****

ಸೂರ್ಯ ಬನಕೆ ಹೋಗಿ ಸುಳಿಬಾಳೆ ಎಲೆ ತಂದೂ|
ಸೂರ್ಯ ದೇವರಿಗೆ ಎಡೆಮಾಡಿ| ಸೂರ್ಯ ದೇವರಿಗೆ ಎಡೆಮಾಡಿ
ರುಕುಮಣ; ಚಿನ್ನಾದ ಸಟುಗ ಬಲಗೈಲಿ ಹಿಡಿದೂ|
ಉಕ್ಕಿನಾ ಕಂಬಾ ಮರೆ ಮರೆ ನಿಂತುಕೊಂಡೂ|
ಇಕ್ಕಿದಾ ಕೈಗೆ ವರಹಗಳ ಕೊಡಿರೆಂದೂ... |
ಪುರುಷರೊಂದಿಗೆ ಬೇಡುವಳೂ...||
ಪುರುಷರೊಂದಿಗೆ ಬೇಡುವಾಗ ರುಕುಮಣಿಗೆ
ಮುದ್ರೆಯುಂಗುರಾ ಬಲಕೈಗೆ| ಇಕ್ಕಿ ದಾ ಕೈಗೆ ವರಹಗಳೆಂದೂ ||
ಚಿನ್ನಾದ ಗಿಂಡಿ ತೆಗೆದು| ರನ್ನಾದ ಬೋಗುಣಿ ತಂದು
ಕೂಡಿದ ಸಭೆಗೆ ಕೈ ಬಾಯಿ ಒಪ್ಪಿತೆಂದೂ| ಗಿಂಡಿ ಪನ್ನೀರ ಹಿಡಿದಾಳು ||

****

# ಓಕುಳಿ ಶಾಸ್ತ್ರದ ಹಾಡು

ನಾರಿಯರೆಲ್ಲರು ಕೂಡಿ.... | ನಮ್ಮ ... ಕೃಷ್ಣನ ಮೇಲೆ
ಓಕುಳಿ ಶಾಸ್ತ್ರವ... ಮಾಡಬನ್ನಿರಿ ||
ನಾರಿಯರೆಲ್ಲರು ಕೂಡಿ ನಮ್ಮ..... ರಂಗನಿಗೆ
ಓಕುಳಿ ಶಾಸ್ತ್ರವ... ಮಾಡಬನ್ನಿರಿ....||
ರಂಗನಾ ಮೇಲೆ ಚೆಲ್ಲಿರಿ...ಓಕುಳಿಯಾ...||



ಬೆಳ್ಳಿಯ ಬಟ್ಟಲೊಳಗೆ...ಅರಶಿಣ ನೀರನು ತುಂಬೀ...|
ಮುದದಿಂದಾ... ರಂಗ ರುಕ್ಮಿಣಿಯರಿಗೆ
ಓಕುಳಿ ಶಾಸ್ತ್ರವಾ... ಮಾಡಬನ್ನಿರಿ...| ನಾರಿಯರೆಲ್ಲರೂ ನೋಡಬನ್ನಿರಿ...||

ಎಲ್ಲರು....ಕೂಡಿ ಅದನು ನೋಡಬನ್ನಿರಿ.....||
ತಂಕ ಮಾಡದೆ...ಕೂಡಿಬೇಗಾ..... ಬನ್ನಿರಿ...ರಂಗ... ರುಕ್ಮಿಣಿಯರ.
ಓಕುಳಿಯಾಟವಾ... ನೋಡ ಬನ್ನಿರಿ...| ಮದುಮಕ್ಕಳನು... ಪರಸಬನ್ನಿರಿ....||
ಮಂಗಳಾರತಿಯಾ...ಬೆಳಗ.... ಬನ್ನಿರಿ....||ನಾರಿ||



# ಪಗಡೆ ಆಡುವಾಗ

ದೇವರ ದೇವಿ ಎಂದಳು ಪೊಗಳುತ್ತಾ | ದಶರಥ ರಾಮಾ
ನಿಮ್ಮ ಕರುರೇಳಯ್ಯಾ ರಾಮಸ್ವಾಮಿ ಏಳು ||

ಮುಂದೋಲೆ ಅರಳೋಲೆ ಮುತ್ತಿನ ಬೊಟ್ಟು ತಳತಳಿಸುತ್ತಿರಲು
ಬಂಧು ವರ್ಗದ ಮೇಲೆ ಚಂದವಾಗುತ್ತಿರಲು | ಆನಂದ ಸೀತೆ
ನಿಮ್ಮ ಕರೆದರೇಳವ್ವಾ | ಸೀತಾದೇವಿಯೇ ಏಳು |

ಆಗ ಸೇತುವೆ ಕಟ್ಟಿ ಲಂಕೆಗೆ ಪೋಗೀ ಸೀತಾ | ರಾವಣ
ರಾಕ್ಷಸನಾಗಿ ಬಂದು ಭೂತಾಳಕ ರಾಮ ನಿಮ್ಮಾ ಕರುದರೇಳಯ್ಯಾ....||

ಚಿತ್ತ ಕುಮುಲ ಕಾಸಿನ ಮುತ್ತಿನಾ ಬೊಟ್ಟು ಉಂಗುರಾ |
ಅಚ್ಚದಿಂದಲಿ ಹೊಳೆವೃತಬಾಲೆ| ಬಾಲೆ ಜಾನಕಿ ನಿಮ್ಮ
ಕರುದರೇಳವ್ವಾ ಸೀತಾದೇವಿಯೇ... ಏಳು..|

ರಾಮರಾಗವು ಬಂದು ತಡವಾಯಿತೇಳವ್ವಾ ಸೀತಾದೇವಿಯೇಳೂ...||
ನಿಮ್ಮ ಕರುದರೇಳವ್ವಾ ಸೀತಾದೇವಿಯೇ... ಏಳು..|

****

# ಮಗುವನ್ನು ತೊಟ್ಟಿಲಿಗೆ ಹಾಕುವಾಗ ಹೇಳುವ ಹಾಡು

ಪಾಲ್ಗಡಲಾ ಮೇಲೆ ಪನ್ನಗಶಯನ| ಆಲದೆಲೆಯಾ ಮೇಲೆ
ಲೋಲನಾಡುವ ಶಿಶುವೆ| ಶ್ರೀಲಲಿತಾಂಗಿ ಚಿತ್ತವಲಿದ ಗುಂಡು
ಬಾರಿ ಬಾರಿಗೂ ಪಾಡಿ ತೂಗುವೆ ನಿನ್ನಾ.. ಜೋ..ಜೋ...||

ಮುದ್ದು ಜೋ ನೀಲವರ್ಣ| ಜೋ ಕೃಷ್ಣ ಗೋಪಾಲ
ಜ್ಯೋತಿ ಸ್ವರೂಪ ಜೋ.. ಜೋ.. ಮುದ್ದು ರಾಯನ ತೊಟ್ಟಿಲೊಳಗೆ
ಮಾಣಿಕ್ಯ ಗುಲಗುಂಜಿಯ ಚೆಂಡು ಜೋ.....ಜೋ...||

ಮಣ ಮಣಂದೆ ಮಧ್ಯದಿ| ಹೋಯಿತೇ..ಕೇಶವಾ..|
ಎಂದಳೆ ಗೋಪಿ| ಜೋ.. ಜೋ..|| ಮುದ್ದು ನೀಲವರ್ಣ
ಜೋ ಕೃಷ್ಣ ಗೋಪಾಲ| ಜ್ಯೋತಿ ಸ್ವರೂಪ ಜೋ..ಜೋ..||

ಮನಕೆ ಸುಖ ನಿದ್ರೆ ಮಾಡಿಕೋ ಬೇಗ| ಮಾಡಿಕೊಂಡರೆ
ಎತ್ತಿ ಕೊಂಡಿರುವರು ಯಾರಪ್ಪಾ| ರಂಗಾ ಜೋ..ಜೋ..ಜೋ..||
ಮುದ್ದು ನೀಲವರ್ಣ ಜೋ ನೀಲವರ್ಣ.. ಜೋ ಕೃಷ್ಣ..
ಸ್ವರೂಪಾ..ಜೋ..ಜೋ..ಜೋ..||

****

ಬಾಲಸಪ್ಪನ ಬಾಯ್ಮಲಿ ಹೊಯ್ಯೀ... ಜೋ...ಜೋ....
ಮುದ್ದು ನೀಲವರ್ಣ.. ಜೋ.. ಜೋ.. ತೂಗಿರೆ ಬಾರೆ ಜೋ..ಜೋ..|

ಜನಕರಾಯನು ಕೊಟ್ಟ, ಕನಕ ನಿರ್ಮಿತವಾದ ತೊಟ್ಟಿಲ ತರಿಸಿ|
ತೊಟ್ಟಿಲೊಳಗಿರಿಸಿ| ಮುನಿ ಪುತ್ರಿಯರೆಲ್ಲರು ಸೇರಿ
ತಾವು ಸಿಂಗರಿಸಿ| ಜೋ.. ಜೋ.. ಸೀತಾದೇವಿಯ ಕಂದಾ.. ಜೋ.. ಜೋ
ಭೂಮಿಗೆ ಪತಿಯಾಗಿ ನಿಂತಾ.. ಮುದ್ದು ನೀಲವರ್ಣ
ನೀಲವರ್ಣದ ತೊಟ್ಟಿಲಾ ತೂಗಿರೆ... ಜೋ...ಜೋ...||

****

ತಂದೆ ನೋಡಿದರೆ ನವುಲ್ಲಕ್ಕಿ.. ತಾಯಿ ನೋಡಿದರೆ ಗಜ ನಿಂಬೆ
ಮಗನಾ ನೋಡಿದರೇ... ಕರಿಗುಂಡರಾಯ| ಜೋ...ಜೋ....||

ನಿನ್ನ ಅತ್ತೆ ತಂದಿದಾರೆ ಕಾಲಿಗೆ ಕಾಲು ಬಳೆ|
ಕಾಲಿಲ್ಲ ಕೈಯಿಲ್ಲ ದಾತ ಎಲ್ಲಿ ಗಿಡಲಿ ಮಗನೆ? ಜೋ...ಜೋ...|

ನಿನ್ನ ಚಿಕ್ಕಮ್ಮ ತಂದಿದಾಳೆ ಕೈಗೆ ಕೈ ಬಳೆ
ಕೈಯಿಲ್ಲ ಕಾಲಿಲ್ಲ ದಾತ| ಜೋ....ಜೋ....||

ಊರು ಮುಂದೆ ಹಾಕಿ ನೀರು ಹಿಂದೆ ಹಾಕಿ
ಬಟ್ಟೆ ಒಗೆಯುವ ಆಗಸನೆ.. ಕೇಳು ||
ಶ್ರೀರಾಮ ಕೃಷ್ಣರ ಕಂದಗೆ ಪಟ್ಟೇಯ ತಾರೋ...ಜೋ....ಜೋ...||
ಚಿನ್ನದ ಹರುನೇಕೆ ಬಿಟ್ಟಾಳು ಸೀತೆ... ಜೋ...ಜೋ...||
ಕನಕ ನಿರ್ಮಿತವಾದ ತೊಟ್ಟಿಲ ತೂಗೀ
ಪದ್ಮದ ಪಟ್ಟೆಗಳಾ ವದರಿ ಹಾಸಿ |
ಮುನಿ ಪತ್ನಿಯರೆಲ್ಲಾ ತಾವು ಶೃಂಗಾರದಿಂದ ಬಂದೂ |
ಅನುಕೂಲಮಾಡಿ ಗಣಪನ ಭಜನೆ ಮಾಡಿ ಜೋ...ಜೋ...||
ಗೊನೆಯ ಬಾಳೆ ಹಣ್ಣು ತೂಗ ಬಂದವರೇಳಿಗಾ..
ನಾಗಸಂಪಿಗೆ ತೂಗ ಬಂದವರೇಳಿಗಾ...ಜೋ....ಜೋ....||

****

ಮುತ್ತು ಮಾಣಿಕ್ಯದ ತೊಟ್ಟಿಲ ತರಿಸಿ |
ಮುತ್ತು ರತ್ನಗಳಿಂದ ಅಲಂಕರಿಸಿ ||
ಹವಳ ಮಾಣಿಕ್ಯದ ತೊಟ್ಟಿಲ ತರಿಸಿ |
ಹೊಸವಸ್ತ್ರಗಳ ಹಾಸಿ ತೊಟ್ಟಿಲ ಸಿಂಗರಿಸಿ ||

ಕಾಡಕಲ್ಲನು ಕೆತ್ತಿ ಚೆಲುವ ಗುಂಡಪ್ಪನೆಂದು |
ಗುಂಡಿನ ಸರವನು ಗುಂಡಪ್ಪಗೆ ಹಾಕಿ
ಪುಂಡರೀಕಾಕ್ಷನ ತೊಟ್ಟಿಲೊಳಗಿಟ್ಟು |
ಕಿನ್ನರಿಯರು ಹಾಡಿ ಹರಸಿದರು ||

ಅಜ್ಜನು ಮಗುವಿಗೆ ಗೆಜ್ಜೆಯ ತಂದು |
ಮಾವಯ್ಯ ಮಗುವಿಗೆ ಮಾಗಾಯಿ ಉಡುದಾರ |
ಸೋಮಲೋಚನ ಜೋ ಸಕಲಾತ್ಮ |
ಜೋರೂಪ ಎಂದು ಹಾಡಿ ಹರಸಿದರು.. ||
ತೂಗಿದರು ನಿರ್ಲಿಂಗ ಲಿಂಗಾತ್ಮನ |
ಕಿನ್ನರಿಯರು ಹಾಡಿ ಹರಸಿದರು ||
ಹೊಟ್ಟೆ ಹಸಿವೆಂದು ಅಳುವನಿವನಲ್ಲ |
ಜೋ ಸಕಲಾತ್ಮ ಜೋ ಎಂದು ಹರಸಿದರು.. ||

# ಹೆಣ್ಣ ಮೇಲೆ ಹೆಣ್ಣು ಕೊಡುವುದು

ಏಳು ವರ್ಷದಿಂದ ಸೇರಿ ಬದುಕಿದೆ ಶಿವನೆ|
ಇಂದಿಗೆ ನಾನು ಬೇಡವಾದೆ|| ಪುರುಷರಿಗೆ
ನಾರಿ ಮೇಲೆ ನಾರಿ ತರುತ್ತೀರೊ ?

ಅಂದಕೆ ತರೊದಲ್ಲಾ   ಚಂದಕೆ ತರೊದಲ್ಲಾ
ಪುತ್ರ ಪುಣ್ಯಫಲ ನಿನಗಿಲ್ಲ ||



ಎನ್ನ ಮಡದಿ ಚಿಂತಿಸದಿರು ಮನದಲ್ಲಿ ||
ನಿನ್ನಾ ಏಳು ಉಪ್ಪರಿಕೆ| ಮೇಲಿರುವ
ಹೂವಿನ ಹಾಸಿಗೆಯಲ್ಲಿ ಮಲಗಿಸುವೆ ||ಏಳು||

ಹಾಲಲಿ ಕೈ ತೊಳೆಸೇನು | ತುಪ್ಪದನ್ನ ಉಣ್ಣುಸೇನು |
ನೀನುಂಡ ಗಂಗಳವ ತೊಳೆಸೇನು || ನನ್ನ ಮಡದಿ
ಚಿಂತಿಸದಿರು ಮನದಲ್ಲಿ ||

ಚಿನ್ನಾದ ಕಡಗವ ತೊಡುಸೇನು ಪಟ್ಟೆ ಸೀರೆಗಳ ಉಡುಸೇನು |
ಸೇವೆಗೆ ದಾಸದಾಸಿಯರನು ಇಡುಸೇನು ನನ್ನ ಮಡದಿ ||
ನನ ಮಡದಿ ದುಃಖ ಪಡದಿರು ಮನದಲ್ಲಿ || ಏಳು ||

ಹೀಗೆಂದ ಮಾತಿಗೆ ಹೊರಟಾಳು ತೌರಿಗೆ
ತೌರೂರ ದಾರಿಯಲಿ ಕಲ್ಲಿಲ್ಲ ಮುಳ್ಳಿಲ್ಲಾ
ಸಾಸುವೆಯಷ್ಟು ಮರಳಿಲ್ಲಾ ||

ದಾರಿಯಲ್ಲಿ ಒಂಟಿಯಾಗಿ ಬರುತಿರುವ ಮಗಳತ್ತ
ದಿಟ್ಟನೆ ನೋಡ್ಯಾರು ಅವರಪ್ಪ ಒಬ್ಬಳೆ ಬಂದಿಯಾಂತ ಕೇಳ್ಯಾರು ||

ಏಳು ವರ್ಷದಿಂದ ಸೇರಿ ಬದುಕಿದೆ ಶಿವನೆ
ಇಂದಿಗೆ ನಾನು ಬೇಡವಾದೆ| ಪುರುಷರಿಗೆ
ಅಪ್ಪಯ್ಯ ನಾನಿಂದು ನಿಮಗೆ ಬೇಡವಾದೆ||

ಅಂದಕೆ ಕೊಡೊದಲ್ಲಾ | ಚಂದಕೆ ಕೊಡೊದಲ್ಲಾ |
ಪುತ್ರ ಪುಣ್ಯ ಫಲ ನಿನಗಿಲ್ಲ | ನನಮಗಳೆ ಚಿಂತಸದಿರು ಮನದಲ್ಲಿ ||

ತಾಯವ್ವ ಬಂದಾರು ಮಗಳ ಕಣ್ಣೀರ ಒರೆಸ್ಯಾರು
ಪತಿರಾಯ ದೇವರಂತೆ ಅಕ್ಕ ತಂಗಿ ಸೇರಿ ಪತಿ ಪಾದ
ಸೇವೆಮಾಡಿ ಸುಖವಾಗಿ ನೀವು ಬಾಳಿರವ್ವ
ಪುತ್ರ ಪುಣ್ಯ ಫಲ ನಿನಗಿಲ್ಲ ನನಮಗಳೆ
ಚಿಂತಿಸದಿರು ಮನದಲ್ಲಿ ||ಏಳು||

# ಋತು ಶಾಂತಿ

ಐದು ಎಲೆ ಒಂದು ಅಡಿಕೆ| ಒಂದು ಗಂಧದ ಬೊಟ್ಟು |
ಗಂಗೆ ಗವುರಮ್ಮ ನ ಶಿವಪೂಜೆಗೆ|| ಶಿವಪೂಜೆ ಶಿವಗಿರಲಿ
ಕನ್ಯೆ ಪೂಜೆ ಒಂದು ನಮ ಗಿರಲಿ||

ಎರಡು ಎಲೆ ಎರಡು ಅಡಿಕೆ| ಎರಡು ಗಂಧದ ಬೊಟ್ಟು
ಗಂಗೆ ಗವುರಮ್ಮ ನ ಶಿವಪೂಜೆಗೆ|| ಶಿವ ಪೂಜೆ ದೇವಗಿರಲಿ
ಕನ್ಯೆ ಪೂಜೆ ಒಂದು ನಮಗಿರಲಿ||

ಮೂರೆಲೆ ಮೂರು ಅಡಿಕೆ ಮೂರು ಗಂಧದ ಬೊಟ್ಟು
ಗಂಗೆ ಗವುರಮ್ಮ ನ ಶಿವಪೂಜೆಗೆ| ಜಯ ಪೂಜೆ ದೇವರಿಗೆ ಇರಲಿ|
ಕನ್ಯೆ ಪೂಜೆ ನಮಗಿರಲಿ ನಮಗಿರಲಿ|

ಒಂದು ಎಲೆ ಒಂದು ಅಡಿಕೆ ಒಂದು ಗಂಧದ ಬೊಟ್ಟು |
ಗಂಗೆ ಗವುರಮ್ಮ ನ ಶಿವಪೂಜೆಗೆ| ಗಂಗೆ ಗವುರಮನ ಶಿವಪೂಜೆಗೆ |
ಕರ್ಪೂರ ಸಾಂಬ್ರಾಣಿ ಹೊಗೆಯು ಘಮ ಘಮಾ ||

****

# ಹರಿಸೇವೆ ಹಾಡುಗಳು

ಸಣ್ಣ ಸಣ್ಣಾ ನಾಮಾ | ಸಣ್ಣಾ ನೀಲಿಯ ನಾಮಾ |
ಎಷ್ಟೊಂದು ನಾಮಾ ಹರಿನಾಮಾ |ಎಷ್ಟೊಂದು ನಾಮಾ
ಹರಿನಾಮ ವೆಂಕಟನಾಮ | ಹಳ್ಳಾದ ಸಾಲಲಿ ಹರಿಸೇವೆ ||

ಹಳ್ಳಾದ ಸಾಲಲಿ ಹರಿಸೇವೆ ವೆಂಕಟನಾಮಾ |
ಶನಿವಾರದಾ ಶಂಖ ನುಡಿದಾವು | ಶನಿವಾರದಾ
ಶಂಖ ನುಡಿದಾವು ವೆಂಕಟರಮಣ | ಅಣ್ಣಾ ಗೋಲಾಡಿ ಬರುತ್ತಾರೆ ||

ಅಣ್ಣಾನ ಗಿರಿಮೇಲೆ ಬಣ್ಣ ಒಂದೆರಡಿಕ್ಕಿರೆ |
ಬಣ್ಣಾ ತುಂಬೀರೆ ಗಿರಿಗೆಲ್ಲಾ | ಬಣ್ಣಾ ತುಂಬೀರೆ
ಗಿರಿಗೆಲ್ಲಾ ತಕುನೈನ | ಹೊನ್ನು ತುಂಬೀರೆ ಕಳಶಕ್ಕೆ ||

ಅಪ್ಪಾನ ಗಿರಿಮೇಲೆ ಕೊಪ್ಪು ಒಂದೆರಡಿಕ್ಕಿರೆ |
ಕೊಪ್ಪು ತುಂಬೀರೆ ಗಿರಿಗೆಲ್ಲಾ | ಕೊಪ್ಪು ತುಂಬೀರೆ
ಗಿರಿಗೆಲ್ಲಾ ತಕುನೈನ | ಮುತ್ತು ತುಂಬೀರೆ ಕಳಶಕ್ಕೆ ||

ಹೊತ್ತು ಹೊತ್ತಿನಾ ಸ್ವಾಮೀ | ಯಾಕಾಗಿ ಹೋಗಿದಿರಿ ಸ್ವಾಮೀ ?
ಅಣ್ಣಾನ ಮನೆಯಾ ಕುಲಸ್ವಾಮಿ || ಅಣ್ಣಾನ ಮನೆಯಾ
ಕುಲಸ್ವಾಮಿ ವೆಂಕಟರಮಣ | ಅಣ್ಣಾ ಗೋಲಾಡಿ ಬರುತ್ತಾರೆ ||

ಹಾಲು ಕಾಸೀವಿ | ಹರಿವಾಣ ಬೆಳಗೀವಿ |
ಕಿತ್ತಳೆ ಹಣ್ಣಾ ಮಡಗೀವಿ || ಕಿತ್ತಾಳೆ ಹಣ್ಣಾ
ಸುಲಿದೀವಿ ವೆಂಕಟರಮಣ | ಕಿಬ್ಬೆದ್ದು ಬರುವಾ ಹರಿಷೆಗೆ ||

ತುಪ್ಪ ಕಾಸೀವಿ ಕೊಪ್ಪನ್ನು ಬೆಳಗೀವಿ |
ಬಾಳೇಯ ಹಣ್ಣಾ ಸುಲಿದೀವಿ || ಬಾಳೇಯ ಹಣ್ಣಾ
ಸುಲಿದೀವಿ ವೆಂಕಟರಮಣ | ಮಿಂದೆದ್ದು ಬರುವಾ ಭಕುತರಿಗೆ ||

ಸ್ವಾಮೀಯ ಪೂಜೆಗೆ ಏನೇನು ತರಬೇಕು?
ಕರಿಯಾ ಕಬ್ಬಿನ ಜಲ್ಲೆ ಎಳೆಯಾ ತೆಂಗಿನಕಾಯಿ | ಯಾಲಕ್ಕಿ ಬೆಲ್ಲಾ ಒಳ್ಳೆಮೆಣಸು |

ಯಾಲಕ್ಕಿ ಬೆಲ್ಲಾ ಒಳ್ಳೆಮೆಣಸು | ಸ್ವಾಮಿಯ ಪೂಜೆಗೆ ಘನವಾದೋ
ಸ್ವಾಮೀ ಗುಂಡದ ಮುಂದೆ ಘನವಾದೋ||
ಸ್ವಾಮಿಯಾ ಮದುವೇಗೆ ಭೂಮೆಲ್ಲಾ ಚಪ್ಪರಾ
ಯಾಲಕ್ಕಿ ಕಂಬಾ ತಳವಾದೊ || ಯಾಲಕ್ಕಿ ಕಂಬಾ
ತಳವಾರ ಸ್ವಾಮಿಗೆ | ಸ್ವಾಮಿಯ ಮದುವೆ ಶನಿವಾರ |
ಶನಿವಾರ-ದಾ ಶಂಖ ನುಡಿದಾವು ||

ಎಲ್ಲಾ ದೇವರಿಗೆ ಎಣ್ಣೇಲಿ ದೀವಿಗೆ | ನಮ್ಮೊಡೆಯ
ತಿಮ್ಮಪ್ಪಗೆ | ತುಪ್ಪಾದ ದೀವಿಗೆ ಉರುಸ್ಯಾರು |
ಎಣ್ಣೇಲಿ ಜ್ಯೋತಿ ಬೆಳಗ್ಯಾರು ||

ಸ್ವಾಮೀ ಗುಂಡದ ಮುಂದೆ ಆರತಿ ಎತ್ತಿ |
ತುಪ್ಪಾದ ದೀವಿಗೆ ಉರುಸ್ಯಾರು | ಎಣ್ಣೇಲಿ ಜ್ಯೋತಿ ಬೆಳಗ್ಯಾರು |
ಎಣ್ಣೇಲಿ ಜ್ಯೋತಿ ಉರಿದಾವು ||

ಹಾರು ಕಚ್ಚೆಯ ಹಾಕಿ | ಜರಿಯಾ ಮುಂಡಾಸು ಕಟ್ಟಿ|
ಮೂರು ನಾಮವ ಧರುಸ್ಯಾರು || ಮೂರೂ.. ನಾಮವ
ಧರುಸ್ಯಾರು ನಮ್ಮ ಸ್ವಾಮೀ.. ಜೋಳಿಗೆ ಹಿಡಿದು ||

ಜೋಳಿಗೆ ಹಿಡಿದೂ | ಬೆಟ್ಟಾದ ಮೇಲೆ ಹೊರಟಾರು |
ಗಿರಿಯನ್ನು ಹತ್ತುತ್ತಾ | ಕಿರುಬೆವರ ಒರೆಸುತ್ತಾ |
ಎಡಬಲದ ಶಂಖಾ ನುಡಿಸುತ್ತಾ ||

ಎಡಬಲದ ಶಂಖಾ ನುಡಿಸುವ ಸ್ವಾಮೀಗೆ
ಗಿರಿಯಾ ಮೇಲೊಂದು ಹರಿಸೇವೆ ||
ಗಿರಿಯಾ ಮೇಲೊಂದು ಹರಿಸೇವೆ ಸ್ವಾಮೀಗೆ ||

ಮಂಗಳಾರತಿ | ಜಯ ಮಂಗಳಾರತಿ
ನಿತ್ಯಾ ಶುಭ ಮಂಗಳಾರತೀ....||

ತಕುನ್ನೈನ= ಹಿರಿಮೆ, ಸಾಮರ್ಥ್ಯ

****

# ಹರಿಸೇವೆಯ ಮಂಗಳಾರತಿ

## (ವೆಂಕಟರಮಣ ಪದ್ಮಾವತಿ ಕಲ್ಯಾಣ)

ವಜ್ರದ ಬಿಂದಿಗೆ| ರುದ್ರಾಕ್ಷಿ ಮಣಿಸರ|

ಬಗ್ಗೀ, ಪನ್ನೀರ ಮುಗಿಲ್ ಬಾಲೆ| ಜಯ ಮಂಗಳಾರತಿ ಶುಭ ಮಂಗಳಂ||

ಬಗ್ಗಿ ಪನ್ನೀರ ಮುಗಿಲ್ ಬಾಲೆ| ಗಿರಿ ಕನ್ಯೆಯ

ಕಂಡು ಶ್ರೀ ವೆಂಕಟರಾಯ ಜಪವನ್ನೇ ಮರೆತಾರು||

ಜಪವನ್ನೇ ಮರೆತಾರು| ಝುಗ್ಗನ್ನೆ ತಿರುಗ್ಯಾರು|

ಯಾವ ರಾಯವರ ಮಗಳಿವಳು"ಮಾ ಶಿವನೆ !?"

ಹಾರುವರ ಮಗಳಲ್ಲಾ ವರ್ತಕರ ಸೊಸೆಯಲ್ಲಾ

ಲಿಂಗ ಜಂಗಮರ... ಕಿರುತಂಗಿ ಇವಳು !

ಲಿಂಗ ಜಂಗಮರ ಕಿರುತಂಗಿ ಇವಳಾದ್ರೆ ನೀವು

ನಮ್ಮ ಮಠಕೆ ದಯಮಾಡಿ| ಜಯ ಮಂಗಳಾರತಿ ಶುಭ ಮಂಗಳಂ||

ನಿಮ್ಮಾ ಮಠಗಳಾ ನಾವೇನು ಬಲ್ಲೆವು?

ಸುಳಿವು ನೀಡಿದರೆ ಬರುತ್ತೇವೆ|

ಹವಳಾದ ಹರಿಗೊಡೆ ಮುತ್ತಿನ ಮುಂಬಾಗಿಲು

ಸಣ್ಣ ರುದ್ರಾಕ್ಷಿ ಮೇಲ್ಕಟ್ಟು ಮಹಾಸ್ವಾಮೀ||

ಅಟ್ಟಾದ ಮೇಲೆ ಪುಟ್ಟ ಮಂಚವ ನೋಡಿ

ನಾಗ ಭೂಷಣದಂತಹ ತಲೆದಿಂಬು| ಅದು ನಮ್ಮ ಅರಮನೆ||

ಹಾಗೆಂದ ಮಾತನು ಕೇಳಿ ಶ್ರೀ ವೆಂಕಟರಾಯ, ಗಿರಿಯಿಂದ ಇಳಿದೂ....|

ಕಾಲು ಕಡಗದ ಮರಿಕುದುರೆ ಏರಿಕೊಂಡು| ಹೋದರು ರಾಯರು ಅರಮನೆಗೆ||

ಜಯ ಮಂಗಳಾರತಿ ಶುಭ ಮಂಗಳಂ||

ಕನ್ಯೆಯ ಕೇಳಲು ಬಂದಾರು ಶ್ರೀ ವೆಂಕಟರಾಯಾ ಇಳಿದು|

ಇಳಿದೂ,| ಗಿರಿಯುದ್ದ ಹೊನ್ನಾ ಅಳಕೊಂಡಾರು||

ಆನೆಯ ಶೃಂಗರಿಸಿ ಆರಾಳು ಕಳುಹಾರು|

ಆರು ಭಟ್ಟಿ ಹೊನ್ನಾ ತರುಸ್ಯಾರು|| ಆ ಹೊನ್ನಾ

ನಿಮಗೇ ಕೊಡುಸೇವು ಮಾ ಶಿವನೆ||

ಆ ಹೊನ್ನಾ ನಿಮಗೆ ಕೊಡುಸೇವು ಮಾ ಶಿವನೆ|

ಕನ್ಯೆಯ ನಮಗೆ ಕೊಡಬೇಕು||

ಆರು ಭಟ್ಟಿ ಹೊನ್ನು ನಮ್ಮ ಕನ್ಯೆಯ ಮುದ್ರಮುಂಗುರದ
ಬೆಲೆಯಿಲ್ಲಾ ಆ ಹೊನ್ನು ! ಕನ್ಯೆಯ ನಾವು ಕೊಡುವವರಲ್ಲಾ ||
ಒಂಟೆಯ ಶೃಂಗರಿಸಿ | ಎಂಟಾಳು ಕಳುಹಾರು |
ಎಂಟು ಭಟ್ಟಿ ಹೊನ್ನು ಅಳಕೊಟ್ಟು |
ಆ ಹೊನ್ನು ನಿಮಗೇ ಕೊಡುಸೇವು ಮಾ ಶಿವನೆ |
ಕನ್ಯೆಯ ನಮಗೇ ಕೊಡಬೇಕು | ಜಯ ಮಂಗಳಾರತಿ ಶುಭ ಮಂಗಳಂ ||
ಎತ್ತು ತರುಸ್ಯಾರು | ಹತ್ತಾಳು ಕಳುಹಾರು |
ಹತ್ತು ಭಟ್ಟಿ ಹೊನ್ನು ಅಳಕೊಟ್ಟು ಆ ಹೊನ್ನು
ನಿಮಗೆ ಕೊಡುಸೇವು ಮಾ ಶಿವನೆ
ನಿಮ್ಮ ಕನ್ಯೆಯಾ ನಮಗೇ ಕೊಡಬೇಕು |
ಹತ್ತು ಭಟ್ಟಿ ಹೊನ್ನು ನಮ್ಮ ಕನ್ಯೆಯ ಮೂಗುತಿ ಬೆಲೆಯಿಲ್ಲಾ
ಆ ಹೊನ್ನು.. ಕನ್ಯೆಯಾ ನಾವು ಕೊಡುವವರಲ್ಲಾ ||
ಹಾಗೆಂದ ಮಾತನು ಕೇಳಿ ಶ್ರೀ ವೆಂಕಟರಾಯಾ
ಗಿರಿಯಿಂದ ಇಳಿಯುತ್ತಾ ಎಂದಾರು (ಕೋಪದಿಂದ)....
"ಆ ಬಾಲೆಯ ತಾರದೆ ಬಿಡೆನಾನು"
ಆದ ಅಡಿಗೆಯ ಬಿಟ್ಟು | ಕೇಳುವ ನಾಮವ ಬಿಟ್ಟು
ಅಪ್ಪ ವೆಂಕಟರಾಯ ಬಂದಿರಲೂ
ಹೆತ್ತವ್ವ ಮಗ್ಗುಲ ಹೊರಳ್ಯಾರು... ಜಯ ಮಂಗಳಾರತಿ ಶುಭ ಮಂಗಳಂ |
ಅಪ್ಪ ವೆಂಕಟರಾಯಾ ಸನ್ಯಾಸ ವೇಷ ತಾಳಿ
ಹೋದಾರು ತಮ್ಮಾ ಗಿರಿಮೇಲೆ|
ಮೂರು ನಾಮದ ದಾಸಯ್ಯ ಭಿಕ್ಷೆಗೆ ಬಂದಿದಾನೆ|
ನೋಡವ್ವ ಅವರಾ ಚೆಲುವಿಕೆಯಾ||
ನೋಡವ್ವಾ ಅವರಾ ಚೆಲುವಿಕೆಯಾ ||
ಬೆಟ್ಟಾದ ಹನ್ನೆರಡು ಜಡೆಯಾ ಶರಣರಿಗೆ ತಾಯವ್ವಾ
ಗಿರಿಜೆಯ ದಾನಾ ಕೊಡಿ ನಮಗೆ...||
ಜರಿ ಮುಂಡಾಸಿನ ದಾಸಯ್ಯ ಭಿಕ್ಷೆಗೆ ಬಂದಿದಾನೆ|
ನೋಡವ್ವಾ ಅವರಾ ಚೆಲುವಿಕೆಯಾ||
ಬೆಟ್ಟಾದ ಇಪ್ಪತ್ತು ಜಡೆಯಾ ಶರಣರಿಗೆ

ಶ್ರೀ ಗಿರಿಜೆಯ ದಾನಾ ಕೊಡಿ ನಮಗೆ|| ಜಯ ಮಂಗಳಾರತಿ ಶುಭ ಮಂಗಳಂ||

ಹಟ್ಟೀಲಿ ಶ್ರೀ ಗಿರಿಜೆ ಕುಟ್ಟುತ್ತಾ ಅಂದಾಳು
ಅಪ್ಪಯ್ಯ ನನ್ನಾ ಕೊಡಬೇಕು ಅವರಿಗೆ||
ಮೂರು ನಾಮದ ಚೆಲುವಾ ದಾಸಯ್ಯಗೆ||

ಹಟ್ಟೀಲಿ ಉಣ್ಣುವವನು ಕೊಟ್ಟಿಗೆಲಿ ಮಲಗುವವನು |
ಬಟ್ಟಾಲ ಹಿಡಿದು ತಿರದುಂಬುವನಾ ಕಂಡೂ|ಏನು ಮೆಚ್ಚಿದೆ ಶ್ರೀ ಗಿರಿಜೆ?

ಹಟ್ಟಿ ನಮ್ಮ ರ ಮನೆ| ಕೊಟ್ಟಿಗೆ ನಮ್ಮ ನಡುಮನೆ
ಬಟ್ಟಾಲು ಭೋಲೋಕ ಸಲ್ಲುವುದು|| ಜಯ ಮಂಗಳಾರತಿ ಶುಭ ಮಂಗಳಂ||

ಹಾದೀಲಿ ತಿರುಗುವವನು ಬೀದೀಲಿ ಉಣ್ಣುವವನು
ಜೋಳಿಗೆ ಹಿಡಿದು ತಿರುಗುವವನಾ
ನೀನೇಕೆ ಮೆಚ್ಚಿದೆ ಶ್ರೀ ಗಿರಿಜೆ? ನಡಿ ನೀನು ನಮ್ಮಾ ನಡುಮನೆಗೆ||

ಹಾದಿ ನಮ್ಮ ರಮನೆ ಬೀದಿ ನಮ್ಮ ನಡುಮನೆ|
ಜೋಳಿಗೆ ನಮ್ಮಾ ಮನೆಸ್ವಾಮೀ,| ಅವನೀಗೆ ನನ್ನಾ ಕೊಡಬೇಕು||
ಕೊಡಬೇಕು ಅಪ್ಪಯ್ಯ ಜಯ ಮಂಗಳಾರತಿ ಶುಭ ಮಂಗಳಂ||
(ಅಷ್ಟು ಹೊತ್ತಿಗೆ ಸನ್ಯಾಸಿ ವೆಂಕಟರಾಯ ಭೂಮಿಯನ್ನು ಸಿಟ್ಟಿನಿಂದ
ಮೆಟ್ಟುತ್ತಾನೆ. ಆಗ ಗಿರಿಜೆ ಸಮೇತ ಆಕಾಶಕ್ಕೆ ಹಾರುತ್ತಾನೆ.
ಗಿರಿಜೆ ಮೊರದಲ್ಲಿ ಭಿಕ್ಷೆ ಹಾಕುವ ದೃಶ್ಯ.)

ಪಟ್ಟೀಲಿ ನಿಂತುಕೊಂಡು | ಪಟ್ಟಿ ಮುತ್ತು ಕೇಳುವವಳೀ
ನೆತ್ತೀಲಿ ಹರಳೋಲೆ ಪದ ಮುತ್ತು ಕಂಡಿರೆ|
ಮೆಟ್ಟಿ ಹಾರುಸ್ಯಾರು ಗಗನಕ್ಕೆ ||

ಮೆಟ್ಟಿ ಹಾರುಸ್ಯಾರು ಗಗನಕ್ಕೆ ಮಹಾಸ್ವಾಮೀ!
ತಕ್ಕೊಂಡು ಹೋದಾರು ಗಿರಿಮೇಲೆ||
ಲಿಂಗ ಕಿತ್ತಾರು ಗಂಗೆಗೆ ಎಸೆದಾರು|
ಲಕ್ಕವ್ವನೆಂದು ಕರೆದಾರು||

ಗಿರಿಯನ್ನು ಹತ್ತುತ್ತಾ ಕಿರುಬೆವರ ಒರೆಸುತ್ತಾ ಎಡಬಲದಾ ಶಂಖಾ ನುಡಿಸುತ್ತಾ |
ಎಡಬಲದ ಶಂಖಾ ನುಡಿಸುವ ಸ್ವಾಮಿಗೆ| ಗಿರಿಯಾ ಮೇಲೊಂದು ಹರಿಸೇವೆ||

ಗಿರಿಯಾ ಮೇಲೊಂದು ಹರಿಸೇವೆ ಜಯಮಂಗಳಾರತಿ ಶುಭ ಮಂಗಳಂ|
ಸ್ವಾಮಿಯ ಮದುವೆಗೆ ಎಲ್ಲಾರೂ ಹೋಗುವ ಬನ್ನಿ |
ಗೊಲ್ಲಾರ ಬಂಡೀ ಬನದಲ್ಲಿ || ಗೊಲ್ಲಾರ ಬಂಡಿ

ಬನದಲ್ಲಿ ಗಿರಿಕೆಸರು | ಗಳಿಗೇಲಿ ಧಾರೆ ಎರೆದಾರು |
ಜಯ ಮಂಗಳಾರತಿ ಶುಭಮಂಗಳಂ |
ಹಣ್ಣಡಿಕೆ ಚಪ್ಪರ ಬಣ್ಣದ ಮೇಲ್ಕಟ್ಟು |
ತಣ್ಣೀರು ಬಾವಿಯೇ ಅರಮನೆ | ಮಹಾಸ್ವಾಮಿಗೆ
ಅಲ್ಲಿ ಶಾಸ್ತ್ರಗಳು ನಡೆದಾವು ||
ಬೆಟ್ಟಾದ ಸ್ವಾಮಿಗೆ ಬಿಟ್ಟಾ ವನಿತೆಯರು
ಪಟ್ಟೇಯ ಸೀರೆ ನೆರಿದುಟ್ಟು | ದಾಸಿಯರು
ಬಟ್ಟಲಾರತಿಯಾ ಬೆಳಗ್ಯಾರು ||
ಜಯ ಮಂಗಳಾರತಿ ಜಯ ಮಂಗಳಾರತಿ
ನಿತ್ಯ ಶುಭ ಮಂಗಳಾರತಿ ಮಂಗಳಂ ಮಂಗಳಂ ನಿತ್ಯಾ ಶುಭ ಮಂಗಳಂ ||

* * * *

# ಸತ್ಯ ನಾರಾಯಣ ಪೂಜೆ ಹಾಡು

ಅಷ್ಟದಳದ ಮಂಟಪದೀ ಸೃಷ್ಟಿಸಿದಾ ದೇವನಿರಿಸಿ |
ನಿಷ್ಠೆ ಯಿಂದಲಿ ದ್ವಿಜರೆಲ್ಲರು ಕೂಡಿ ವಿಶಿಷ್ಟ ಮಂತ್ರಗಳಿಂದ
ಪೂಜೆಯ ಮಾಡಿ | ತಮ್ಮಿಷ್ಟ ವರವ ದಯ ಮಾಡಬೇಕೆನುತಲೀ...
ಪುಷ್ಪದಾರತಿಯಾ ಬೆಳಗೀರೆ||
ಶ್ರೀಪತಿ ಪರಿವಾರಗಳು ದೀಪ ಪ್ರಕಾಶದಂತಿರಲು |
ದೀಪ ಧೂಪಾದಿಗಳನ್ನೆಲ್ಲಾ ಮಾಡಿಸಿ | ಸೂಪಾದಿ ಭಕ್ಷ್ಯ ನೈವೇದ್ಯಕ್ಕೆ
ನೀಡಿ ವದ್ರ್ಯಪನಾ ಸವಗೆ|| ಸಂಪಿಗೆ ಯಾರತಿಯಾ ಬೆಳಗೀರೆ||
ಸಗರ ತನುಜಹಿತ ನಾಗಶಯನ ಕುಳ್ಳಿರಲು | ನಾಗಯೋಗ
ನಂದನ ದ್ವಿಜರೆಲ್ಲ ತಮ್ಮಿಷ್ಟ ಭೋಗವ ಕರುಣಿಸಬೇಕೆಂದು |
ತಾಮಗ ಪನ್ನಗ ತಾಂಬೂಲ ಸಮರ್ಪಿಸಿ | ಕರ್ಪೂರ ದಾರತಿಯಾ ಬೆಳಗೀರೆ||
ಮಂಗಳಂ ಸತ್ಯದೇವಗೇ ಮಂಗಳಂ ನಿತ್ಯ ನಿರ್ಮಲೆಗೆ
ಮಂಗಳಂ ಮಂಗಳಂ ಪರಮಾತ್ಮನಿಗೆ |
ಮಂಗಳಂ ಮಂಗಳಂ ತೇಜೋ ಮಯನಿಗೆ ||
ಶ್ರೀ ಸತ್ಯನಾರಾಯಣ ಸ್ವಾಮಿಯ ಪಾದಾರವಿಂದಗಳಿಗೆ
ನಮೋ ನಮೋ ನಮೋಸ್ತುತೆ ||

* * * *

# ಶ್ರೀ ಕೃಷ್ಣ ಪಾರಿಜಾತ ಹೂವಿನ ಹಾಡು

ಮೇಳ : ಯದು ಕುಲೇಶನೇ | ಸ್ವಾಮೀ ಪದುಮನಾಭನೇ |
ಪರಮ ಪುರುಷನೆ ಸ್ವಾಮೀ ಪಂಕಜಾಕ್ಷನೆ |
ಮುದದಿ ನೆನೆವೆನು ರಂಗನ ಪದನ ಪೇಳುವೆ ||
ದ್ವಾರವತಿಯೊಳು ಹದಿನಾರು ಸಾವಿರ
ನೂರಾ ಎಂಟು | ಸ್ತ್ರೀಯರಾಳುತ್ತಿದ್ದರು |
ಸಕಲ ಜನರೆಲ್ಲಾ ಸ್ವಾಮೀ ಅಜನ ಪಿತನೆಂದೂ |
ಭಜನೆ ಮಾಡಲು ಅಲ್ಲಿಗೆ ದ್ವಿಜನು ಬಂದಾನು |

ನಾರದನ ಪ್ರವೇಶ : ಬಂದ ವಿಪ್ರಗೆ ತಂದು ವಸನ ಹಾಸಿದಾ. (ಚಾಪೆ)
ವಂದನೆ ಮಾಡಿದಾ ಸುಖಿ? ಎಂದು ಕೇಳಿದಾ |

ಅಭಿನಯ : ಅಷ್ಟಲೋಕವು ಬಹಳ ಸೃಷ್ಟಿಗೊಂಡಿತು |
ಕೃಷ್ಣ ರಾಯಾಗೆ ಹೂವ ಕೊಟ್ಟು ನಾರದಾ ||
ನಾರಿರುಕುಮಣಿ ಇತ್ತ ಬಾರೆ ಎನುತಲೀ |
ನಿನ್ನಾ ವಾಲೆ ತುರುಬಿಗೆ ಪಾರಿಜಾತ ಮುಡಿಸುವೆ ||
ಚಾರದೂವಿನ ಪರಿಮಳ ಊರು ತುಂಬಿತು |
ಮೂರು ಲೋಕದಿ ಪರುಷ ಮೀರಿ ಹೋಯಿತು ||

ನಾರದ ಸತ್ಯಭಾಮೆಗೆ : ಹೋಗಿ ನಾರದಾ ಸಾಗಿ ಸತ್ಯಭಾಮೆಗೆ ಹೇಳಿದಾ ಕ್ಷಣ
(ಹೇಳಲು ಹೋಗುತ್ತಾನೆ) ಬಾಲೆ ಕೇಳಿ ಮನದಲ್ಲಿ ತಾಳಲಾರದೆ ಮನವು ಧೂಳಿಗೊಂಡಿತು ||

ಸತ್ಯಭಾಮೆ : ಗಿಡವನೇರಲೋ ದೊಡ್ಡ ಮರವನೇರಲೋ |
(ಕೋಪದಿಂದ) ಮೇಲೆ ಪರ್ವತಾ ಹತ್ತಿ ಹಾರಿಧುಮುಕಲೋ-|
: ವಜ್ರದುಂಗುರ ಚೆಲುವೆ ಗೆಜ್ಜೆ ಸರಪಳಿ
ವಜ್ರ ಮಂಟಪಕೆ ಎತ್ತಿ ಗೆಜ್ಜೆ ಒಗೆದಾಳು|
ವಾಲೆ ಸರಿಗೆಯಾ ತೋಳ ವಂಕಿ ಬಾಪುರಿ
ಕೀಲು ಕಡಗವಾ ಕಳಚಿ ದೂರ ಬಿಸುಟಾಳು|
ಜಡೆಯ ಬಂಗಾರ ಮುಡಿಯಿಂದ ಹರಿದು ಬಿಸುಟಾಳು
ಮಾನುನಿಮಣಿ ತೆಗೆದು ದೂರ ಬಿಸುಟಾಳು|
ಕದವ ಹಾಕ್ಯಾಳು ಆಕೆ ದುಃಖ ಪಟ್ಟಾಳು||
ಹೆಣ್ಣು ಜನ್ಮವು ಸ್ವಾಮೀ ಹುಟ್ಟಬಾರದು |
ಹುಟ್ಟಿದರೂ ಸ್ವಾಮೀ ಕಷ್ಟ ಪಡಬಾರದು |
ಅತಿ ವ್ಯಸನ ಗೊಂಡಳು ಆಕೆ ಪದ್ಮಾವತಿಯೊಳು ||

ನಾರದ : ಇಷ್ಟು ಚೇಷ್ಟೆಯಾ ಕಟ್ಟಿ ನಾರದಾ
ಕೃಷ್ಣರಾಯಗೆ ಹೋಗಿ ಬೇಗ ಸುದ್ದಿ ಹೇಳಿದಾ ||
ಕೃಷ್ಣನಪ್ರವೇಶ : ಹೊಡೆಯುವ ಭೇರಿಯಾ | ಹಿಡಿಯುವ ತಾಳತಮ್ಮಟೆ |
ಒಡೆಯ ರಂಗನು ಇತ್ತ ಮನೆಗೆ ಬಂದಾನು ||
ತಿರುಗಿ ನೋಡದ ಹರಿಗೆ ಬಹಳ ನುಡಿದಾಳು |
ಗಳಿಗೆ ನಿಂತಿರೆ ಮನಸು ಕರಗಿದಾತಗೆ |
ದಿಕ್ಕು ದಿಕ್ಕಿಗೂ ಇವಳ ಒಡವೆ ಚೆಲ್ಲಿದೆ |...||
ಕೃಷ್ಣ : ಸತ್ಯಭಾಮೆಯೆ ಮತ್ತೆ ಯಾಕೆ ನೊಂದಿಯೇ?
ಯಾಕೆನ್ನ ಮಡದಿಯೇ ಎನ್ನ ಲೋಕ ನಾಯಕಿ |
ಸಾಕು ಬಿಡು ಬಿಡೂ ನಿನ್ನ ಮನದ ಸಂಶಯಾ
ಬಹಳ ಪರಿಯಮಾಡಿದೆ ||
ಸತ್ಯಭಾಮೆ : ಪರಿಯು ನೀನಲ್ಲವೆ? ಬೇರೆಕಪಟವೇನಿದೆ? ಸ್ವಾಮಿ ಕಪಟವೇನಿದೆ?
ಕೃಷ್ಣ : ಒಂದು ಹೂವಿಗೆ ಬಾಲೆ ಹೀಗೆ ಮುನಿದರೆ?
ಇಂದ್ರ ಲೋಕದಾ ಗಿಡವ ಕಿತ್ತು ತರಿಸುವೆ ||
ಎಂದ ಮಾತಿಗೆ ಆಕೆ ಆನಂದದಿಂದಲೀ
ಸತ್ಯ : ಬಂದು ಭಾಮೆ ಕೃಷ್ಣನ ಮುಂದೆ ಕುಳಿತಳು
ತೆಗೆದು ಪದಕವ ಕೃಷ್ಣನ ಕೊರಳಿಗೆ ಹಾಕಿದಳು ||
ಕೃಷ್ಣ : ತುರುಬು ಕಟ್ಟಿದಾ ಕಣ್ಣಾ ಕವರನೊತ್ತಿದಾ |
ಸತ್ಯ : ಮನ್ನಿಸೆಂದೂ ಆಕೆ ವಂದನೆ ಮಾಡಿದಳು |
ವಂದನೆ ಮಾಡಿದಾ ಸತಿಗೆ ಸಂತಸ ಪಟ್ಟಾನು |
ಪಟ್ಟೆ ಮಂಚದಲೀ ಅವರು ಸರಸವಾಡಿದರು ||
ಶ್ರೀಕೃಷ್ಣ ಗರುಡನಾ ಹತ್ತಿ ಶ್ರೀಕೃಷ್ಣ ಸತ್ಯ ಲೋಕಕೆ
ಯುದ್ಧಕ್ಕೆ ಹೊರಡುವನು : ಇಂದ್ರನೊಡನೆ ಅವನು ಕದನವಾಡಿದಾ |
ಉಳಿದ ಇಂದ್ರನ ಬಾಣ ಸುರರು ಗೆದ್ದಾರು ||
ಪಾರಿಜಾತ ಗಿಡವನು ಕಿತ್ತು ತರಿಸಿದಾ |
ಸತ್ಯ ಭಾಮೆಯ ಮನೆಯ ಮುಂದೆ ನೆಡುಸಿದಾ....||
(ಆದರೆ ಪಾರಿಜಾತ ಹೂ ರುಕ್ಮಿಣಿಯ ಅಂಗಳದಲ್ಲಿ ಬೀಳುತ್ತದೆ.)
ಸತ್ಯಭಾಮೆಗೂ ಶ್ರೀ ಕೃಷ್ಣರಾಯಗೂ | ಪಾರಿಜಾತದ
ಕಥೆಯ ಕೇಳಿ ಹೇಳಿದವರು ಶ್ರೀ ಕೃಷ್ಣ ದೇವರ ಸ್ವಾಮೀ
ವಂದನೆ ಮಾಡಿದರು | ಸ್ವಾಮೀ ವಂದನೆ ಮಾಡಿದರು ||

# ಹೊನ್ನಮ್ಮನ ಕೆರೆ ರೂಪಕ

ತುಂಬಿ ಹಾಡಿನ ಸಂಗ್ರಹ ಆಧಾರದಿಂದ ಚಿಕ್ಕ ನಾಟಕ ರೂಪದಲ್ಲಿ ಪ್ರದರ್ಶಿಸಲು ಮತ್ತು ಸುಲಭವಾಗಿ ಕಡಿಮೆ ಸಮಯದಲ್ಲಿ ನಾಟಕವಾಡಲು ಸಾಧ್ಯವಾಗುವಂತೆ ಪಲ್ಲವಿಗೆ ಪ್ರಾಮುಖ್ಯತೆ ಕೊಟ್ಟು, ಮುಖ್ಯ ಅಂಶಗಳನ್ನು ಮಾತ್ರ ಬರೆದುದಾಗಿದೆ. ಹೊನ್ನಮ್ಮನ ಕೆರೆಯ ಕಥೆ ಚಿಕ್ಕ ತರಗತಿಗಳಲ್ಲಿ ಓದಿದ ನೆನಪು, ಹಿರಿಯರ ಬಾಯಿಂದ ಕೇಳಿದ ನೆನಪು ಮತ್ತು ಗೌಡ ಸಂಸ್ಕೃತಿ ಪುಸ್ತಕ ಆಧರಿಸಿ ಬರೆದಿರುತ್ತೇನೆ. ಇದನ್ನು ಕೊಡಗು ಗೌಡ ಮಹಿಳಾ ಒಕ್ಕೂಟದ 2ನೇ ವಾರ್ಷಿಕ ಸಭೆಯಲ್ಲಿ ಪ್ರದರ್ಶಿಸಲು ಬರೆದರೂ ಸಾಧ್ಯವಾಗದೆ ಈ ಹಾಡಿನ ಪುಸ್ತಕದ ಕೊನೆಗೆ ಸೇರಿಸಿದ್ದೇನೆ. ವಾದ್ಯ ಸಂಗೀತದೊಂದಿಗೆ ತುಂಬಿ ಪಲ್ಲವಿ ಸುಂದರವಾಗಿ ಮೂಡಿ ಬರಬಹುದೆಂದು ಆಶಿಸುತ್ತೇನೆ.

ಪಾತ್ರ ಪರಿಚಯ

| | | |
|---|---|---|
| ಸಂಗೀತ ವಾದ್ಯ | : | |
| ಹಾಡುವ ಗುಂಪು | : | |
| ನಿರೂಪಕ | : | |
| ಹೊನ್ನಮ್ಮಳ ಮಾವ | : | ಮುತ್ತಯ್ಯ |
| ಅತ್ತೆ | : | ನಂಜವ್ವ |
| ಅಕ್ಕ | : | ನಾಗಮ್ಮ |
| ಭಾವ | : | ಬಲರಾಮ |
| ಮೈದುನ | : | ಬಸವ |
| ತಂದೆ | : | ತಾಯಿ |
| ಅಣ್ಣ | : | ಅತ್ತಿಗೆ |
| ಪತಿ | : | ಶಿವರಾಯ |
| ಹೊನ್ನಮ್ಮ | : | ಸೊಸೆ |
| ಒಡ್ಡ | : | ಕೆರೆ ತೋಡುವವ |

# ಹೊನ್ನಮ್ಮನ ಕೆರೆ

ಹಿನ್ನೆಲೆ - ಸಂಗೀತವಾದ್ಯ :ತುಂಬಿ ತುಂಬಿ ನೀರ್‍ತುಂಬಿ ಕೆರೆತುಂಬಿತು ||
ತುಂಬಿ -ತುಂಬಿತು | ಆನಂದ ತುಂಬಿತು |
ತುಂಬಿ ತುಂಬಿತು | ದುಃಖ ತುಂಬಿತು
ತುಂಬಿ ತುಂಬಿ ನೀರು ತುಂಬಿತು | ನೀರ್‍ತುಂಬಿತು ಕೆರೆ ತುಂಬಿತು ||

ಗುಂಪಿನವರು : ತುಂಬಿ... ತುಂಬಿ... ತುಂಬಿ... ತುಂಬಿ...

(ಹಾಡು) ಹತ್ತೂರು ಮುತ್ತೂರು | ಸುತ್ತೂರು ಸಿರಿಯೂರು |
ಹಸುರಾದ ಹೊನ್ನೂರು | ಹೆಸರಾದ ನವಿಲೂರು |
ಸೊಸೆ ಮುದ್ದು ಹೊನ್ನಮ್ಮ | ಪತಿಯಾದ್ರೆ ಶಿವರಾಯ |
ಮಾವಾಂದ್ರೆ ಮುತ್ತಯ್ಯ | ಅತ್ತೆವ್ವ ನಂಜವ್ವ - ತುಂಬಿ ತುಂಬಿ ||
ಭಾವಂದ್ರೆ ಬಲರಾಮ | ಅಕ್ಕಾಂದ್ರೆ ನಾಗಮ್ಮ |
ಮೈದುನ ಬಸುವಯ್ಯ | ತುಂಬಿದ ಸಂಸಾರ
ಸುಖವಾಗಿರೊ ಹೊತ್ತಿಗೆ - ತುಂಬಿ ತುಂಬಿ ||
ಹಂಚಿನ ಮನೆ ಮಾಡು | ಕಂಚಿನ ಕದಬಾಗ್ಲು |
ಚೊಚ್ಚಲು ಬಸಿರಾಕೆ | ಸೊಸೆ ಮುದ್ದು ಹೊನ್ನಮ್ಮ |
ಹೆತ್ತಳು ಶಿಶು ಕಂದನ್ನ - ತುಂಬಿ ತುಂಬಿ ||
ಅಷ್ಟೆಂಬಾ ಹೊತ್ತಿಗೆ ಊರಿನ ರಾಜ್ಯಕ್ಕೆ |
ದಂಡೆನೆ ಒಡ್ಡಿತು | ಪತಿಯಾದ್ರೆ ಶಿವರಾಯ |
ಎಡೆಮಾಡಿ ನಡೆದಾನು ದಂಡಿಗೆ | ತುಂಬಿ ತುಂಬಿ ||
ಊರಲ್ಲಿ ನೀರಿಲ್ಲಾ | ಬರಗಾಲ ಊರಿಗೆ |
ಬಾಯಾರಿ ಮರುಗಲು ಗೌಡಯ್ಯ ಮುತ್ತಯ್ಯ |
ಊರಿಗೆ ಹೊಸಕೆರೆ ತೋಡಲು ಮನಮಾಡಿ | ತುಂಬಿ ತುಂಬಿ ||

ನಿರೂಪಕ :

ಊರುಗೌಡ ಮುತ್ತಯ್ಯ ಕೆರೆ ತೋಡಲು ಒಡ್ಡನನ್ನು ಕರೆಸುತ್ತಾನೆ. ಗೌಡನ ಮನೆಗೆ ಬಂದ ದಪ್ಪ ಮೀಸೆಯ ಕೆಂಗಣ್ಣಿನ ನೀರೊಡ್ಡ ಗೌಡನ ಸೊಸೆ, ಹೊನ್ನಮ್ಮಳ ಬಣ್ಣದ ಅಂದಕೆ ಮರುಳಾಗಿ, ಗುಟ್ಟಾಗಿ ಅವಳನ್ನು ಮುಟ್ಟಲು ಹೋದಾಗ ಹೊನ್ನಮ್ಮಳ ಸಿಟ್ಟಿಗೆ ಪಾತ್ರನಾದ. ಆ ಸೇಡನ್ನು ಒಡ್ಡ ಮಣ್ಣಿನಲ್ಲಿ ತೀರಿಸಲು ನಿರ್ಧರಿಸಿ ಹೆಣ್ಣಾಸೆಯ ನೀರೊಡ್ಡ ಕೆರೆಯಲ್ಲಿ ಬರುವ ಜಲಧಾರೆ ತಪ್ಪಿಸಿ ಬೇರೆ ಕಡೆ ಕೆರೆ ತೋಡುತ್ತಾನೆ. ಆದರೆ ಕೆರೆಯಲ್ಲಿ ನೀರು ಬರಲಿಲ್ಲಾ... ಊರ ಜನರು ಬಾಯಾರಿ ಬಾಯಿ ಬಾಯಿ ಬಡಿದರು.

ಕೊನೆಗೆ ಚಿಂತಾಕ್ರಾಂತನಾದ ಗೌಡ ಒಡ್ಡನಿಗೆ ಹೀಗೆನ್ನುತ್ತಾನೆ. ತುಂಬಿ ತುಂಬಿ (ಹಾಡು)

ಗೌಡ : ಒಂದು ವರಹ ಕೊಡುತ್ತೇನೆ ಒಡ್ಡಾನೆ ಕೆರೆತೋಡು...(ಸಂಗೀತವಾದ್ಯ ಮಾತ್ರ)

ಒಡ್ಡ : ಒಂದ್ವರಕೆ ನೀರೆನೆ ಬರಾಕಿಲ್ಲ ಗೌಡರೆ| ತುಂಬಿ... ತುಂಬಿ....

ಗೌಡ : ಎರಡು ವರಹ ಕೊಡುತ್ತೇನೆ ಒಡ್ಡಾನೆ ಕೆರೆತೋಡು|

ಒಡ್ಡ : ಎರಡ್ವರಕೆ ನೀರೆನೆ ಬರಾಕಿಲ್ಲ ಗೌಡರೆ| ತುಂಬಿ ತುಂಬಿ

ಗೌ : ಅಂಗೈ ತೊಳೆವಂಥಹ ಹಿರಿಚೆಂಬು ಕೊಡುತ್ತೇನೆ

ಒ : (ಅಭಿನಯ) ಇಲ್ಲ.... ತುಂಬಿ ತುಂಬಿ

ಗೌ : ಕರೆಯುವ ಕಪಿಲೆಯ ಮೈ ಸವರಿ ಕೊಡುತ್ತೇನೆ

ಒ : ಇಲ್ಲ... ತುಂಬಿ ತುಂಬಿ

ಗೌ : ಕಂಬಳಕ್ಕೆ ಕಟ್ಟಿದ ಕೋಣನ ಕೊಡುತ್ತೇನೆ

ಒ : ಇಲ್ಲ... ತುಂಬಿ ತುಂಬಿ

ಗೌ : ಓಟಕ್ಕೆ ಮೇಲಾದ ಕುದುರೆಯ ಕೊಡುತ್ತೇನೆ

ಒ : ಇಲ್ಲ... ತುಂಬಿ ತುಂಬಿ

ಗೌ : ಬೀಸುವ ಬೆಳ್ಳಿಯ ಬೀಸಣಿಗೆ ಕೊಡುತ್ತೇನೆ.

ಒ : ಇವು ಯಾವುದಕ್ಕೂ ನೀರು ಬರುವುದಿಲ್ಲಾ ಗೌಡರೇ... ತುಂಬಿ ತುಂಬಿ (ಯಾಚನಾ ಧ್ವನಿಯಿಂದ)

ಗೌಡ : ಹಾಗಾದರೆ ನಾನು ಇನ್ನೇನು ಕೊಡಲಯ್ಯಾ ನೀರೊಡ್ಡಾ ನಿನಗೆ? (ದರ್ಪದಿಂದ)

ಒ : ಗೌಡರೆ, ನಿಮ್ಮ ಮುದ್ದಿನ ಸೊಸೆ ಬಾಣಂತಿ ಹೊನ್ನಮ್ಮಳನ್ನು ಈ ಕೆರೆಗೆ ಬಲಿಯಾಗಿ ಕೊಟ್ಟರೆ ನೀರು ತುಂಬಿ ಬರುತ್ತದೆ. ತುಂಬಿ ತುಂಬಿ

ನಿರೂಪಕ: ಇದನ್ನು ಕೇಳಿದ ಗೌಡ ಮರುಗುತ್ತಾ ಕುಸಿದು ತಲೆಗೆ ಕೈ ಹೊತ್ತು ಕುಳಿತ. ಅತ್ತ ಊರ ಜನರಿಗೆ ನೀರಿಲ್ಲ ದನ ಕರುಗಳು ಸಾಯುತ್ತಿವೆ. ಮಗ ಶಿವರಾಯ ದಂಡಿಗೆ ಹೋಗಿದ್ದಾನೆಂದು ಕಳವಳ ಪಡುತ್ತಾನೆ.

ಗೌ : ಅಯ್ಯೋ, ನೀರೊಡ್ಡಾ ನಾನು ಹೇಗೆ ಒಪ್ಪಲಿ ? ಸೊಸೆ ಹೊನ್ನಮ್ಮಳನ್ನು ಹೇಗೆ ಬಲಿ ಕೊಡಲಿ ನೀರೊಡ್ಡಾ ನಾನೇನು ಮಾಡಲಿ ? ಅಯ್ಯೋ....

ಒ : ಗೌಡರೇ, ನೀವು ಶಿಶು ತಾಯಿ ಹೊನ್ನಮ್ಮಳನ್ನು ಈ ಕೆರೆಗೆ ಬಲಿಕೊಡಲೇ ಬೇಕು. ಇಲ್ಲದಿದ್ದರೆ ನೀರೇ ಬರುವುದಿಲ್ಲ... ತುಂಬಿ ತುಂಬಿ

ಗೌಡ : ನಾನು ಮಡದಿ ನಂಜವ್ವಳೊಡನೆ ಈ ವಿಷಯವನ್ನು ಹೇಳುತ್ತೇನೆ. (ಗಂಡ ಹೆಂಡತಿ ಬಹಳ ಹೊತ್ತು ಚರ್ಚಿಸಿ ವಿಧಿ ಬರಹವನ್ನು ಹಳಿಯುತ್ತಾರೆ)(ಅಭಿನಯ)

ಗೌಡ : (ಹೆಂಡತಿಯೊಡನೆ) ಒಂದು.. ಒಂದು ಊರಿನ ಜೀವರಾಶಿಗಳು ಉಳಿಯುವುದಾದರೆ ಒಂದು ಜೀವದ ಬಲಿ ಮುಖ್ಯವಲ್ಲ. ಈ ಊರು ಉಳಿದ ಪುಣ್ಯವು

ನಮ್ಮ ದಾಗುತ್ತದೆ! (ಎಂದು ಬಲಿಗಾಗಿ ಒಪ್ಪಿಸುತ್ತಾನೆ)

(ಈ ಮಾತುಗಳನ್ನು ಕೇಳಿಸಿಕೊಂಡ ಚಿಕ್ಕ ಬಾಲಕ ಮೈದುನ ಬಸವಯ್ಯಾ ಕಣ್ಣೀರು ಸುರಿಸುತ್ತಾ ಓಡಿ ಬಂದು ಅತ್ತಿಗೆಗೆ ಹೇಳುತ್ತಾನೆ.)

ಬಸವ : ಅತ್ತಿಗೆ, ಇಂದಿನ ಸಂಜೆಗೆ ನಿನ್ನನ್ನು ಹೊಸ ಕೆರೆಗೆ ಬಲಿಯಾಗಿ ಕೊಡುತ್ತಾರೆ... ತುಂಬಿ ತುಂಬಿ ( ದುಃಖದ ಹಿನ್ನಲೆವಾದ್ಯ)

ನಿರೂಪಕ: ಬಸವನ ಮಾತು ಕೇಳಿ ಹೊನ್ನಮ್ಮನ ನಿಂತ ನೆಲ ಮುಳ್ಳಾಯಿತು. ಮನವು ಕಲ್ಲಾಯಿತು.– ಯೋಚಿಸಿ ಸುರಿವ ಕಣ್ಣೀರು ತಡೆದು, ಅಳುವ ಮೈದುನನ ತಲೆ ಸವರಿ, ತೊಟ್ಟಿಲ ಶಿಶುವನ್ನು ಬಿಗಿದಪ್ಪಿ ತುಂಬಿ... ತುಂಬಿ...

ಹೊನ್ನಮ್ಮ : ಬಸವಯ್ಯಾ, ನಾನು ಹೊಸಕೆರೆಯ ಬಲಿಗಾಗಿ ಹೋಗುತ್ತೇನೆ.... ಬಲಿಗಾಗಿ... ಹೋಗುತ್ತೇನೆ... ತುಂಬಿ... ತುಂಬಿ...

(ಇದನ್ನು ಕಂಡ ಅತ್ತೆ, ನಂಜವ್ವ)

ನಂಜವ್ವ : ಸೊಸೆ ಮುದ್ದು ಹೊನ್ನಮ್ಮ.. ಚಿನ್ನದ ಬಿಂದಿಗೆಗೆ ಬೆಳ್ಳಿಯ ನೇಣನ್ನು (ಹಗ್ಗ) ತೆಗೆದುಕೊಂಡು ಹೊಸ ಕೆರೆಗೆ ನೀರು ತರಲು ನಿನ್ನ ಮಾವನವರು ಹೇಳಿ ಕಳುಹಿಸಿದ್ದಾರೆ. ತುಂಬಿ... ತುಂಬಿ...

ಒ : ಅತ್ತೆಮ್ಮ, ನಾನು ಹೊಸ ಕೆರೆಗೆ ಬಲಿಗಾಗಿ ಹೋಗುವ ಮುನ್ನ ನನ್ನ ತವರಿಗೊಮ್ಮೆ ಹೋಗಿ ಬರುತ್ತೇನೆ.

ಅತ್ತೆ : ಹೊನ್ನಮ್ಮ, ನಿನ್ನ ಮಾವನವರಲ್ಲಿ ಕೇಳಿ ನಿನ್ನ ತವರಿಗೆ ಹೋಗಿ ಬಾ.

ಮಾವ : ನಿನ್ನ ಅಕ್ಕ ಬಾವನವರಲ್ಲಿ ಕೇಳಿ ಹೋಗಿ ಬಾ...

ಅಕ್ಕಬಾವ : ನಮ್ಮೊಡನೆ ನೀನು ಕೇಳಬೇಡ ಹೊನ್ನಮ್ಮ ಬಸವನನ್ನು ಕೇಳಿ ಹೋಗಿ ಬಾ.

ಹೊನ್ನಮ್ಮ : ಬಸವ, ನಾನು ತವರಿಗೆ ಹೋಗಿ ಬರುತ್ತೇನೆ.

ಬಸವ : ನಾನು ತವರಿಗೆ ಹೋಗಿ ಬರುತ್ತೇನೆ. ಬಸವಾ.....

ಬಸವ : ಅತ್ತಿಗೆ, ತೊಟ್ಟಿಲ ಶಿಶು ಏಳುವ ಮುನ್ನ ನೀನು ತಿರುಗಿ ಬರಬೇಕು.

ಹೊನ್ನಮ್ಮ : (ತಲೆಬಾಗಿ)... ಆಯ್ತು. ದುಃಖದ ವೀಣೆ ನಿಧಾನವಾಗಿ ತುಂಬಿ ತುಂಬಿ.

ನಿರೂಪಕ: (ಹೊನ್ನಮ್ಮ ಹೊರಡುತ್ತಾಳೆ. ತವರಿನ ಘನತೆಯನ್ನು ಕನ್ನಡ ನಾಡಿನ ಜನಪದ ಗೀತೆಯ ವರ್ಣನೆಯಿಂದ ಹಾಡುತ್ತಾನೆ)

ಹೊನ್ನಮ್ಮ : ಬಲದ ಕೈಯಲ್ಲಿ ಗೆಜ್ಜೆ ಕತ್ತಿ, ಎಡದ ಕೈಯಲ್ಲಿ ಪನ್ನ ಕೊಡ||
ತವರೂರ ಹಾದೀಲಿ ಕಲ್ಲಿಲ್ಲಾ ಮುಳ್ಳಿಲ್ಲಾ | ಸಾಸಿವೆಯಷ್ಟು ಮರಳಿಲ್ಲಾ
ತವರೂರ ನೆಲ ಕಾಲಿಗೆ ಹಸುರಾಗಿ ತೆಂಗು ತಲೆಬಾಗಿ ಬೀಸಣಿಗೆ ಬೀಸಿತು |
ಕದಳಿಯು ಗೊನೆ ಬಾಗಿ ತಂಗಾಳಿ. ಮುದ್ದಿಸಿತು | ತುಂಬಿ ತುಂಬಿ||

ನಿರೂಪಕ: ದೂರದಿಂದ ತವರ್ಮನೆ ಕಂಡಳು.
ಹಂಚಿನ ಮನೆಮಾಡು | ಕಂಚಿನ ಕದಬಾಗ್ಲು ತುಂಬಿ ತುಂಬಿ...
ಉಪ್ಪರಿಗೆ ಮೇಲಿಂದ ತಾಯಿ ನೋಡುತ್ತಾಳೆ

ತಾಯಿ : ಇದೇನು ಮಗಳು ಹೊನ್ನಮ್ಮ ? ಸಣ್ಣಕ್ಕಿ ಬಯಲಲ್ಲಿ ಉರಿಬಿಸಿಲಲ್ಲಿ ಒಬ್ಬಳೇ ಬರುತ್ತಿದ್ದಾಳೆ ಮುಖ ಕಂದಿ ಹೋಗಿದೆ| ಸೇವಕಿ, ಹೊನ್ನಮ್ಮ ಬರುತ್ತಿದ್ದಾಳೆ. ಕಾಲು ತೊಳೆಯಲು ಪಾತಾಳದ ಪನ್ನೀರು ತಾ. ರತ್ನದ ಕಂಬಳಿ ಹಾಸಿ ಕುಡಿಯಲು ಬೆಳ್ಳಿಯ ಗಿಂಡಿಯಲ್ಲಿ ನೊರೆಹಾಲು ಕೊಡು ( ಸೇವಕಿ ಕೊಡುತ್ತಾಳೆ)

ನಿರೂಪಕ: ನೊರೆ ಹಾಲು ಕುಡಿದು ಕೊಟ್ಟಿಗೆ ಬಾಗಿಲಲ್ಲಿ ನಿಂತು ನೂರೊಂದು ಗೋವುಗಳ ಹಿಂಡನ್ನು ಕರುಗಳನ್ನು ಕಣ್ತುಂಬ ನೋಡಿ ಮುದ್ದಿಸಿ ತಾಯಿ ಹತ್ತಿರ ಬಂದು,
... ತುಂಬಿ.... ತುಂಬಿ...
ತಾಯವ್ವಾ, ತಂದೆಪ್ಪ, ಅಣ್ಣಯ್ಯ ಅತ್ತಿಗಮ್ಮ ನಿಮ್ಮ ಕೈಯಲ್ಲಿ ನನಗೆ ಒಂದೊಂದು ತುತ್ತು ಅನ್ನವನ್ನು ಉಣ್ಣಿಸಿರಿ. (ಊಟ ಮಾಡಿ ತುಳಸಿ ಗಿಡವನ್ನು ಅಂಗಳದಲ್ಲಿ ನೆಟ್ಟಳು) ತುಂಬಿ... ತುಂಬಿ....
ಅವ್ವಾ, ಅಪ್ಪಾ, ಅತ್ತಿಗೆ, ಅಣ್ಣ ಎಂದಿಗೆ ಈ ತುಳಸಿ ಗಿಡವು ಬಾಡಿತೋ ಅಂದಿಗೆ ನನ್ನ ಋಣ ಮುಗಿಯಿತು.

ಮನೆಯವರು :ಅಂತಹ ಏನ್ಕಷ್ಟ ಬಂದಿದೆ ಮಗಳೆ ನಿನಗೆ?
ಅಂತಹ ಕಷ್ಟ ನನಗೆ ಬಂದಿಲ್ಲಾ ನನ್ನ ಪತಿರಾಯ ದಂಡಿಗೆ ಹೋದವರು ಇನ್ನೂ ವಾಪಾಸು ಮರಳಲಿಲ್ಲಾ (ಮಾತು ಹಾರಿಸಿದಳು) ತುಂಬಿ... ತುಂಬಿ

ಅತ್ತಿಗೆ : ನಿನ್ನ ಹಣೆ ಕುಂಕುಮ ವಿರೋದಾದ್ರೆ | ನಿನ್ನ ಪತಿ ದಂಡಿಂದ ವಾಪಾಸು ಮರಳುತಾನೆ. ಕಣ್ಣೀರು ಸುರಿಸಬೇಡ. ಕಾಲಾಳುಗಳನ್ನು ಕಳುಹಿಸಿ ನಿನ್ನ ಕಂದನ ತೊಟ್ಟಿಲನ್ನು ಇಲ್ಲಿಗೆ ತರಿಸೋಣ. ತುಂಬಿ... ತುಂಬಿ...

ಹೊನ್ನಮ್ಮ : ಹಾಗೇನು ಮಾಡ್ಬೇಡಿ. ಬರುವಾಗ ನನ್ನ ಹೊಟ್ಟೆಯನ್ನು ನೋಡಿದಿರಿ. ಹೋಗುವಾಗನನ್ನ ಬೆನ್ನನ್ನು ನೋಡಿಕೊಳ್ಳಿ.(ಎಂದು ವಾಪಾಸು ನಡೆದಳು)...ತುಂಬಿ.. ತುಂಬಿ ||

ನಿರೂಪಕ: ವಾಪಾಸು ಬಂದು ತನ್ನ ಕೋಣೆಗೆ ನಡೆದು ತೊಟ್ಟಿಲ ಮಗುವಿಗೆ ಹಾಲೂಡಿಸಿ, ಒಳ್ಳೆಣ್ಣೆ ದೀವಿಗೆ ಹಚ್ಚಿ ನಾಯಿ ಬೆಕ್ಕನ್ನು ತೊಟ್ಟಿಲ ಬಳಿ ಕೂರಿಸಿ ತೊಟ್ಟಿಲನ್ನು ಎಳೆದು ಬಿಟ್ಟಳು. ಕಡೆಗೊಮ್ಮೆ ಮಗುವನ್ನು ನೋಡಿ ನುಡಿದಳು... ತುಂಬಿ.. ತುಂಬಿ..
ಹಚ್ಚಿದ ದೀವಿಗೆ ಹಚ್ಚಿದಂತೆ ಇರಲಿ | ತೂಗಿದ ತೊಟ್ಟಿಲು
ತೂಗುತ್ತಾ ಇರಲಿ | ಯಾರ್‍ಯಾರು ಬಂದು ಕರೆದರೂ ತೆರೆಯದಿರು ಕದವೆ...
ದಂಡಿಂದ ಪತಿರಾಯ ಬಂದು ಕರೆದರೆ ತೆರೆದು ಬಾ ಬಾಗಿಲೆ...
ತುಂಬಿ... ತುಂಬಿ...

ನಿರೂಪಕ : ಎಂದು ಅತ್ತೆ ಮಾವ ಭಾವ ಅಕ್ಕಂದಿರ ಕೈಯಿಂದ ತುತ್ತು ಅನ್ನವನ್ನು ಉಣ್ಣಿಸಿಕೊಂಡು ಮೈದುನ ಬಸವಯ್ಯನ ತಲೆ ಸವರಿ ಗೋವುಗಳ ಪಿಡನ್ನೊಮ್ಮೆ ಕಣ್ತುಂಬಾ ನೋಡಿದಳು. ಬಲಿಗಾಗಿ ಧಾರೆ ಸೀರೆಯನ್ನುಟ್ಟು, ಆಭರಣ ತೊಟ್ಟು, ಬೈತಲೆ ಬಾಚಿ ಹಣೆಗೆ ಕುಂಕುಮವಿಟ್ಟು, ಹೂ ಮುಡಿದು ಮದುವಗಳಂತೆ ಸಿಂಗರಿಸಿ ಚಿನ್ನದ ಕೊಡಪಾನ ಸೊಂಟದಲ್ಲಿಟ್ಟುಕೊಂಡು ಬೆಳ್ಳಿಯ ನೇಣನ್ನು ಹಿಡಿದು,

ಹೊನ್ನಮ್ಮ : ಬಸವಯ್ಯಾ ಹೊಸಕೆರೆಗೆ ಬಲಿಗಾಗಿ ಹೋಗ್ತೇನೆ ತುಂಬಿ... ತುಂಬಿ...

ನಿರೂಪಕ : ಎಂದು ಮನೆ ಮೆಟ್ಟಿಲನ್ನು ಬುಡಕ್ಕೆಂದು ಇಳಿದು ದಡದಡನೆ ಹೊಸಕೆರೆ ಕಡೆಗೆ ನಡೆದಾಗ ಆ ಸುದ್ದಿಗೆ ತೊಟ್ಟಿಲ ಶಿಶು ಚೀರುತ್ತದೆ. ಗೋವುಗಳು ಅಂಬಾ ಎನ್ನುತ್ತವೆ.ಹೊನ್ನಮ್ಮ ಮುಂದಿಟ್ಟ ಹೆಜ್ಜೆ ಹಿಂದೆ ಇಡಲಿಲ್ಲ. ಕೆರೆಯ ಮೆಟ್ಟಲಿಗೆ ಬಂದು ತುಂಬಿ... ತುಂಬಿ....

ಹೊನ್ನಮ್ಮ : ಮಾವಯ್ಯ.. ಹೊಸಕೆರೆಗೆ ನೀರಿಗೆ ಬಂದಿದ್ದೇನೆ. ಚಿನ್ನದ ಕೊಡಪಾನ ಬೆಳ್ಳಿಯ ನೇಣು ಹಿಡಿದು ನೀರಿಗೆ ಬಂದಿದ್ದೇನೆ. ಹೊಸ ಕೆರೆಯ ಬಲಿಗಾಗಿ ಬಂದಿದ್ದೇನೆ. (ಶೋಕ) ತುಂಬಿ... ತುಂಬಿ... ||

ಮಾವ : (ಮರುಕದಿಂದ) ಮೆಟ್ಟಿಲು ಇಳಿದು ನೀರು ತೆಗಿ ಹೊನ್ನಮ್ಮಾ !

ಹೊ : ಪಾದಕ್ಕೆ ನೀರು ಬಂತು ಮಾವಯ್ಯ. ತುಂಬಿ... ತುಂಬಿ...

ಮಾವ : ಇನ್ನೊಂದು ಮೆಟ್ಟಿಲಿಳಿ ಹೊನ್ನಮ್ಮಾ | ತುಂಬಿ... ತುಂಬಿ...

ಹೊ : ಮಾವಯ್ಯ, ಸೊಂಟಕ್ಕೆ ನೀರು ಬಂತು ! ತುಂಬಿ... ತುಂಬಿ...

ಮಾವ : ಇನ್ನೊಂದು ಮೆಟ್ಟಿಲಿಳಿ ಹೊನ್ನಮ್ಮಾ | ತುಂಬಿ... ತುಂಬಿ...

ಹೊ : ಮಾವಯ್ಯ ಕುತ್ತಿಗೆಗೆ ನೀರು ಬಂತು ಬಂತು ತುಂಬಿ... ತುಂಬಿ...

ನಿರೂಪಕ : ಮುಳುಗುತಾಳೆ.. ಮುಳುಗುತಾಳೆ.. ಪೂರ್ತಿ ಮುಳುಗುತಾಳೆ.. ಶೋಕ ವೀಣೆ...

ಗುಂಪಿನವರು: ಹೊಸ ಕೆರೆ ಹೊನ್ನಮ್ಮನ ಮರೆಮಾಡಿಕೊಂಡಿತು ||
ನೀರ್ತುಂಬಿ ಉಕ್ಕಿತು | ಕೆರೆ ತುಂಬಿ ನಿಂತಿತು | ಹೊಸಕೆರೆ ನೀರಿಂದಾ
ಊರಿಗೆ ಆನಂದಾ.. ತುಂಬಿತು ತುಂಬಿತು ತುಂಬಿತು ನೀರು..ಹಿಮ್ಮೇಳ....
ತುಂಬಿತು... ನೀರು ತುಂಬಿತು... ತುಂಬಿ... ತುಂಬಿ||

ಭಾಗ 2

ನಿರೂಪಕ : ಅಷ್ಟು ಹೊತ್ತಿಗೆ ದಂಡಿಂದ ಶಿವರಾಯ ಊರಿಗೆ ಮರಳುತ್ತಾನೆ. ಮನೆಯಲ್ಲಿ ಎಂದಿನ ಕಳೆಯಿಲ್ಲ. ಮಡದಿಯನ್ನು ಕಾಣದೆ ಅಪ್ಪನ ಹತ್ತಿರ ಕೇಳುತ್ತಾನೆ. ತಾಯವ್ವಾ, ತಾಯವ್ವಾ, ಹೊನ್ನಮ್ಮಳೆಲ್ಲಿ ?
(ಯಾರೂ ಮಾತಾಡುವುದಿಲ್ಲ.)

ಶಿವರಾಯ : ಬಸವಾ, ನಿನ್ನ ಅತ್ತಿಗೆ ಎಲ್ಲಿಗೆ ಹೋಗ್ಯಾಳು?(ಆತಂಕ)

(ಅಳುತ್ತಾನೆ)

ಬಸವಯ್ಯ : ಅಣ್ಣಯ್ಯ ಅತ್ತಿಗೆಯನ್ನು ಒಡ್ಡನ ಮಾತಿಗೆ ಹೊಸಕೆರೆಗೆ ಬಲಿ ಕೊಟ್ಟಿದ್ದಾರೆ.

ನಿರೂಪಕ : ಶಿವರಾಯನ ಕೋಪ ತಾರಕಕ್ಕೇರುತ್ತದೆ. ಭುಗಿಲೆದ್ದ ಕೋಪದಿ ರೋಷವುಕ್ಕುತ್ತದೆ. ಒಡ್ಡನನ್ನು ಹುಡುಕಾಡುತ್ತಾನೆ. ಒಡ್ಡನನ್ನು ಹುಡುಕುತ್ತಾ ಅವನ ತಲೆ ಜುಟ್ಟು ಹಿಡಿದೆಳೆದು ಹೊಸಕೆರೆ ಏರಿಯ ದಂಡೆಯ ಮೇಲೆ ತನ್ನ ದಂಡಿನ ಕತ್ತಿಯಿಂದ ರುಂಡವನ್ನು ಹಾರಿಸಿ ತಲೆಯ ನೆತ್ತರನ್ನು ತನ್ನ ಹಣೆಗೆ ಬೊಟ್ಟಿಡುತ್ತಾನೆ. ತುಂಬಿ....ತುಂಬಿ....||

ನಿರೂಪಕ : ಮನೆಗೊಮ್ಮೆ ನಡೆದಾನು.. ಕದತಟ್ಟಿ ತೆಗೆದಾನು..

ತೊಟ್ಟಿಲು ತೂಗಿತ್ತು ಶಿಶುಕಂದ ಮಲಗಿತ್ತು | ತುಂಬಿ....ತುಂಬಿ||

ನಿರೂಪಕ : ದೀಪ ಉರಿಯುತಿತ್ತು. ತೊಟ್ಟಿಲು ಶಿಶುವನ್ನು ಹೊತ್ತುಕೊಂಡು ಅಳುವ ಬಸವನ ಕೈಹಿಡಿದು ಹೊಸಕೆರೆ ದಂಡೆಯಲ್ಲಿ ನಿಂತನು. ಅಷ್ಟರಲ್ಲಿ ಊರಿಗೆ ಊರೆ ನೆರೆದಿತ್ತು. ಮನೆಯವರು ಹೊನ್ನಮ್ಮನ ತವರಿನವರು ಎಷ್ಟು ಕರೆದರೂ.... ತುಂಬಿ....ತುಂಬಿ....||

ಊರ ಜನರಿಗೆ ತಮ್ಮ ತಪ್ಪರಿವಾಗಿ ತಲೆತಲೆ ಹೊಡಕೊಂಡರು.

ಶಿವರಾಯ : ಕೇಳಿರಿ ನನ್ನ ಬಂಧುಗಳೇ, ನನ್ನ ಋಣ ಇಂದಿಗೆ ಮುಗಿಯಿತು.ನೀವಿನ್ನು ಬಂದ ಹಾದೀಲಿ ನಿಮ್ಮ ಮನೆಗಳಿಗೆ ತೆರಳಿ ಸುಖವಾಗಿರಿ ತುಂಬಿ...ತುಂಬಿ...

ನಿರೂಪಕ : ಎಂದು ಹೇಳಿ ಹೊನ್ನಮ್ಮಳನ್ನು ಕರೆಯುತ್ತಾನೆ.

ಶಿವರಾಯ : ಹೊನ್ನಮ್ಮಾ.. ಹೊನ್ನಮ್ಮಾ.. ಹೊಸಕೆರೆ ಹೊನ್ನಮ್ಮಾ ಸತ್ಯದಲಿ ಹುಟ್ಟಿ ಧರ್ಮದಲಿ ಬೆಳೆದು ನ್ಯಾಯದಲ್ಲಿ ನಡೆದು ನೀತಿಲಿ ನಿಂತಿರುವವಳೇ

ಕೆರೆನೀರ ನಡುವಿಂದ ಬಂದು ನನಗೊಮ್ಮೆ ನಿನ್ನ ಮುಖ ತೋರಿಸು..

ಹೊನ್ನಮ್ಮಾ.. ಹೊನ್ನಮ್ಮಾ.. ಹೊನ್ನಮ್ಮಾ || ತುಂಬಿ...ತುಂಬಿ.....||

ನಿರೂಪಕ : ಪತಿರಾಯನ ದನಿಕೇಳಿ ಹೊನ್ನಮ್ಮ ಕೆರೆ ನೀರ ನಡುವಿಂದ ಬಲಕೈಯಾ - ತೋರು ಬೆರಳನ್ನೆತ್ತಿ ಮುದ್ರೆಯುಂಗುರ ತೋರಿಸುತ್ತಾಳೆ.

ಹಾಡು : (ಹಿನ್ನೆಲೆ ಸಂಗೀತ ವಾದ್ಯದೊಂದಿಗೆ)

ಗುಂಪಿನವರು: ಅದನೋಡಿ ಶಿವರಾಯ | ಹೊನ್ನಮ್ಮ ಪತಿರಾಯ |

ತೊಟ್ಟಿಲು ಶಿಶುಗೂಡಿ | ಬಸವಯ್ಯ ಜೊತೆಗೂಡಿ |

ಹೊಸಕೆರೆ ನೀರಿಗೆ ಹಾರಿದ ಶಿವರಾಯ |... ತುಂಬಿ.... ತುಂಬಿ... ||

ಕೆರೆ ನೀರು ಮೂವರ ಮರೆಮಾಡಿ ಉಕ್ಕಿತು |

ತೆರೆನೀರು ನಾಲ್ವರ ಜತೆಗೂಡಿ ನಲಿಯಿತು|
ಹೊನ್ನಮ್ಮನ ಕೆರೆ ಎಂದು ಹೆಸರಾಯ್ತು ಅಲ್ಲಿಗೆ.| ತುಂಬಿ... ತುಂಬಿ.... ||
ಶಿವನಂದಿ ಪಾರ್ವತಿ | ರೂಪಿಂದ ಕಲ್ಲಾಗಿ |
ಉಳಿದಾರು ಜಲದಲ್ಲಿ | ಪರವಾಗಿ ಮೆರೆದಾರು | ತುಂಬಿ... ತುಂಬಿ... ||
ಪತಿರಾಯ ಶಿವರಾಯ | ನಂದಿಯೆ.. ಬಸವಯ್ಯಾ
ಶಿಶುಕಂದ ಚಂದ್ರಯ್ಯ | ಗಂಗೆಯೆ ಹೊನ್ನಮ್ಮಾ
ಉಳಿದಾರು ಜಲದಲ್ಲಿ | ಪರವಾಗಿ ಮೆರೆದಾರು | ತುಂಬಿ... ತುಂಬಿ... ||
ಪತಿರಾಯ ಶಿವರಾಯ | ನಂದಿಯೆ ಬಸವಯ್ಯಾ
ಶಿಶುಕಂದ ಚಂದ್ರಯ್ಯ | ಗಂಗೆಯೆ ಹೊನ್ನಮ್ಮಾ
ಜಲದೇವಿ ರೂಪಾಗಿ ಮೆರೆದಾಳು ತುಂಬಿ... ತುಂಬಿ... ||
ನಿರೂಪಕ : ಈ ಪುಣ್ಯ ಕಥೆ ಕನ್ನಡ ನಾಡಿನವರ ತ್ಯಾಗದ ಕಥೆ ವಿಶಾಲ ಮನೋಭಾವನೆ|
ಪೂರ್ವದಿಂದಲೇ ಇತ್ತೆಂಬುದಕ್ಕೆ ಈ ಹೊನ್ನಮ್ಮಳ ಕಥೆಯೇ ಸಾಕ್ಷಿ
ತುಂಬಿ.. ತುಂಬಿ..||

ತುಂಬಿ... ತುಂಬಿ... ಸಂಗ್ರಹ :
ರಚನೆ



# ಅತ್ತೆ ಸೊಸೆಯರ ಸಂವಾದ (ಸುವ್ವಿ ಹಾಡು)

ಅಕ್ಕ ನೀಲಮ್ಮ ಚಿಕ್ಕದೊಂದು ಒನಕೆ ಹಿಡಿದು
ಅಕ್ಕಿಯಮ್ಮನ ತೊಳಸುತ್ತಾ ಸುವ್ವಿ ಸುವ್ವೀ... ||
ಅಕ್ಕಿಯಮ್ಮನ ತೊಳಸುತ್ತಾ ನೀಲಮ್ಮ ಇರುವಾಗ|
ಮುಕ್ಕಣ ಶಿವನು ಬಂದಾ ನಲ್ಲಿಗೆ ಸುವ್ವಿ ಸುವ್ವೀ...||
ಹೂವಿನ ತೋಟಕ್ಕೆ ನೀರನ್ನು ಹೊಯ್ಯುವಾಗ|
ಮಣ್ಣಿನ ಕೊಡಪಾನ ಒಡೆದೋಯ್ತು ಸುವ್ವಿ ಸುವ್ವೀ... ||

ಅತ್ತೆ : ಮಣ್ಣಿನಾ ಕೊಡಪಾನ ಒಡೆದೋಯ್ತು ಎಲೆ ಮಗನೇ
ನೀಲಾದೇವಿ ಎಂಬ ಸೊಸೆಬ್ಯಾಡ ಸುವ್ವಿ ಸುವ್ವೀ... ||

ಸೊಸೆ : ಮಣ್ಣಿನ ಕೊಡಪಾನ ಒಡೆದೋದ್ರೆ ನಾ
ಚಿನ್ನಾದ ಕೊಡಪಾನ ತರಿಸುವೆ ಅತ್ತೆಮ್ಮ ಸುವ್ವಿ ಸುವ್ವೀ.... ||

ಅತ್ತೆ : ಕೂತುಕೊಂಡು ಭತ್ತ ಕುಟ್ಟಿ | ಕುಡಿಕೆಲಾದ್ರೆ ಅನ್ನ ಮಾಡೇನು|
ನೀಲಾ ದೇವಿ ಎಂಬಾ ಸೊಸೆ ಬ್ಯಾಡ ಎಲೆ ಮಗನೆ|
ಬಿಟ್ಟು ಬಿಡವಳಾ ತವರೀಗೆ|| ಸುವ್ವಿ ಸುವ್ವೀ...||
ಕೊರಳ ಪದಕ ಮಾರಿ ಇನ್ನೊಂದು ಬಾಲೆಯ ತರುವೆ ನಾ|
ಎಲೆ ಮಗನೆ ಬಿಟ್ಟು ಬಿಡುವಳಾ ತವರೀಗೆ||

ಮಗ : ಹತ್ತು ಜನರು ಕೂಡಿ ಹಸೆಹೊಯ್ದು ತಂದ ಹೆಣ್ಣು ನಾನು |
ಹೇಗೆ ತಾಯಿ ಬಿಡಲೀ ತವರೀಗೆ ಸುವ್ವಿ ಸುವ್ವೀ...||

ಸೊಸೆ : ಅತ್ತೆಯ ಮಾತಕೇಳಿ ನೀಲಾ ದೇವಿಗೆ|
ದುಃಖ ಉಕ್ಕಿ ಬಂದಿತೀಗಾ || ಸುವ್ವಿ ಸುವ್ವೀ...||
ಹೂವಿನ ಸಾಲಿಗೆ ನಡೆದಾಳು ನೀಲಾದೇವಿ
ಇತ್ತ ಕೇಳಿ ಹೂಗಳೆ ಇತ್ತ ಕೇಳಿ ನಿಮ್ಮನು ಸಾಕಿ ಸಲಹೀದೆ|
ನನ್ನ ಅತ್ತೆಗೆ ನಾ ಬೇಡವಂತೆ ಹೂಗಳಿರಾ|
ಇನ್ನ್ಯಾರು ನಿಮಗೆ ಗೊಬ್ಬರ ನೀರು ಹಾಕುತ್ತಾರೆ ? ಸುವ್ವಿ ಸುವ್ವೀ... ||
ಅತ್ತೆಯ ಮಾತನ್ನು ಕೇಳದಿರಿ ತಾಯವ್ವ|
ಹೊಗಬೇಡಿ ತಾಯಿ ತವರೀಗೆ ಸುವ್ವಿ ಸುವ್ವೀ...||
ಮೇಲುಪ್ಪರಿಗೆ ಕೋಣೆಗೆ ಬಂದಾಳು ನೀಲಾದೇವಿ
ಪಟ್ಟೇಯ ನುಟ್ಟ್ಯಾಳು ಆಭರಣ ಧರಿಸ್ಯಾಳು ಸುವ್ವಿ ಸುವ್ವೀ... ||
ಅರಮನೆ ಮೆಟ್ಟಿಲನು ಇಳಿದಾಳು ಅತ್ತೆಗೆ
ಕೋಪದಿ ಶಾಪ ಇಟ್ಟ್ಯಾಳೀಗ ಸುವ್ವಿ ಸುವ್ವೀ....||

ತಾಯಿ : ತನ್ನ ತವರಿಗೆ ನಡೆದಾಳು ಸಣ್ಣಕ್ಕಿ ಬಯಲಲ್ಲಿ
ಹೋಗುವಾಗ ಅವಳ ತಾಯಿ ಸುವ್ವಿ ಸುವ್ವೀ...||
ಮೇಲುಪ್ಪರಿಗೆಯಲಿ ಕೂತುಕೊಂಡು ನೋಡ್ಯಾಳು |
ಹಬ್ಬಾಂದ್ರೆ ಬರೋಳಲ್ಲಾ ಸುಗ್ಗೀಂದ್ರೆ ಬರುವವಳಲ್ಲಾ |
ಸಣ್ಣಕ್ಕಿ ಬಯಲಾ ಉರಿಬಿಸಿಲಲ್ಲಿ ಮಗಳಾ ಕಂಡು ಸುವ್ವೀ ಸುವ್ವೀ...||

ತಾಯಿ : ಏನಾಗಿ ಬಂದೀಯಾ ಮಗಳೇ ಎಂತದಾಗಿ
ಬಂದೀಯಾ ? ನೀ ಬಂದಾ ಸುದ್ದಿ ಹೇಳಬೇಕು ಸುವ್ವೀ ಸುವ್ವೀ...||

ಮಗಳು : ಹೂವಿನ ತೋಟಕ್ಕೆ ನೀರನ್ನು ಹೊಯ್ಯುವಾಗ |
ಮಣ್ಣಿನ ಕೊಡಪಾನ ಒಡೆದೋಯ್ತು ನನ್ನತ್ತೆ
ನನಗೆ ಕಷ್ಟ ಕೊಟ್ಯಾಳು ನೀನು ಬೇಡವೆಂದು
ತವರೀಗೆ ಕಳುಸ್ಯಾಳು ತಾಯವ್ವಾ ||
ನೀಲಾದೇವಿ ತವರಿಗೆ ಹೋದ ಎರಡನೆ ದಿನದಲ್ಲಿ
ಅವಳತ್ತೆ ಸತ್ತು ಹೋದಾಳೀಗಾ ಅಲ್ಲಿಂದ ಸುವ್ವಿ ಸುವ್ವೀ...||

ಅಳಿಯ : ಮುಕ್ಕಣ್ಣ ಶಿವನು ನೀಲಾದೇವಿ ತವರೀಗೆ ಅಳಿಯ ಬಂದನೀಗಾ
ಅತ್ತೆಮ್ಮಾ ನೀವು ಕೇಳಿ ಅತ್ತೆಮ್ಮಾ ನೀವು ಕೇಳಿ
ನಿಮ್ಮಾ ಮಗಳನ್ನು ಕಳುಹಬೇಕು ಸುವ್ವಿ ಸುವ್ವೀ...||

ತಾಯಿ : ನನ್ನ ಮಗಳಿಗೆ ಅಂಬಲಿ ಗಂಜಿ ಹಾಕ್ಯೇನು |
ನಿನ್ನ ಮನೆಗೆ ನಾ ಕಳಿಸಲಾರೆ ಸುವ್ವಿ ಸುವ್ವೀ...|

ಅಳಿಯ : ನನ್ನ ತಾಯಿ ತೀರಿಹೋದಳು ಅತ್ತೆಮ್ಮಾ
ಮಗಳನ್ನು ಕಳಿಸಿ ಕೊಡಿ ಸುವ್ವೀ ಸುವ್ವಿ... ||

****

# ಗಂಗೆ ಗೌರಿ ಸಂವಾದದ ಸುವ್ವಿ

(ಸವತಿ ಮತ್ಸರ)

ಹೊಳೆಯಾ ಹದ್ದಿನಲಿ ಹೊಯ್ಲಾಟ ಆಡುವಾಗ |
ಮರಳಲ್ಲಿ ಒಂದ್ಹೆಣ್ಣು ಸಿಕ್ಕಿತೀಗ || ಸುವ್ವೀ...||

ಶಿವರಾಯ : ಮರಳಲ್ಲಿ ಒಂದ್ಹೆಣ್ಣು ಸಿಕ್ಕಿತ್ತೀಗಾ ಶಿವರಾಯ್ಗೆ |
ಎಲೆ ಹೆಣ್ಣೆ ನೀನಾದ್ರೆ ನಮ್ಮ ನೆಗೆ ಬರ ಬೇಕು || ಸುವ್ವೀ...||

ಗಂಗಮ್ಮ : ಕರಿ ಮೀನು ತಿನ್ನುತ್ತೇವೆ ಕರಿ ಕಂಬಳಿ ಹೊದಿತೇವೇ |
ಕೈಯಲ್ಲಿ ಚೆಂಬಾ ಹಿಡಿತೇವೆ ಶಿವರಾಯ್ರೆ || ಸುವ್ವೀ...||

ಶಿವ : ಕರಿಮೀನು ತಿಂದೇನು ಕರಿ ಕಂಬಳಿ ಹೊದ್ದೇನು |
ಕೈಯಲ್ಲಿ ಚೆಂಬಾ ಹಿಡಿದೇನು ಎಲೆಹೆಣ್ಣೆ... |
ನೀನಾದ್ರೆ ನಮ್ಮ ನೆಗೆ ಬರ ಬೇಕು ಸುವ್ವೀ...||

ಗಂಗಮ್ಮ : ಕರಿಮೀನು ತಿಂದೇವು | ಕರಿ ಕಂಬಳಿ ಹೊದ್ದೇವು |
ಕಾಸಿದ ಕಳ್ಳು ಕುಡಿದೇವು | ಶಿವರಾಯ್ರೆ
ಆ ಹೆಣ್ಣು ನಿಮಗೆ ಸಮನಲ್ಲಾ...| ಸುವ್ವೀ...||

ಶಿವ : ಕರಿಮೀನು ತಿಂದೇನು | ಕರಿಕಂಬಳಿ ಹೊದ್ದೇನು |
ಕಾಸಿದ ಕಳ್ಳು ಕುಡಿದೇನು | ಎಲೆ ಹೆಣ್ಣೆ...
ನೀನಾದ್ರೆ ನಮ್ಮ ನೆಗೆ ಬರಬೇಕು... | ಸುವ್ವೀ....||

ಗಂಗಮ್ಮ : ನಿಮ್ಮ ನೆಗೆ ಬರೋದಾದ್ರೆ ಶಿವರಾಯ್ರೆ |
ಅಕ್ಕಾ... ಗೌರಮ್ಮ ನ ಕೇಳಾಬೇಕು | ಸುವ್ವೀ...||

ಶಿವ : ಅಕ್ಕಾ ಗೌರಮ್ಮ ನ ಕೇಳೊದೇನು ಎಲೆ ಹೆಣ್ಣೆ...
ನಾ ಹೇಳಿದ ಹಾಗೆಲ್ಲೊ ಗೌರಮ್ಮಾ ?....| ಸುವ್ವೀ....||

ಗಂಗಮ್ಮ : ನಿಮ್ಮ ನೆಗೆ ಬರೋದಾದ್ರೆ ಶಿವರಾಯ್ರೆ |
ಅಪ್ಪ ಅಂಬಿಗನಾ ಕೇಳಬೇಕು | ಸುವ್ವೀ...||

ಶಿವ : ಅಪ್ಪಾ ಅಂಬಿಗನಾ ಕೇಳೋದಾದ್ರೆ ಕೇಳಾನ|
ಅಂಬಿಗನ ಮನೆಗೀಗಾ ನಡಿ ಹೋಗಾನ | ಸುವ್ವೀ...||

ನಿರೂಪಕ : ಶಿವರಾಯ ಮುಂದಾಗಿ ಗಂಗಮ್ಮ ಹಿಂದಾಗಿ |
ಅಂಬಿಗನ ಮನೆಗೆ ನಡೆದರೀಗಾ | ಸುವ್ವೀ...||

ಅಂಬಿಗನ ಮನೆಗೆ ಹೋದಾರು ಶಿವರಾಯ |
ಅಂಬಿಗ - ಅಂಬಿಗಾ - ಎಂದು ಕರೆದಾರು -| ಸುವ್ವೀ -||
ಒಂದು ಕರೆವಾಗ ಆಲಿಸ್ಯಾನು ಅಂಬಿಗಾ -|
ಎರಡನೆ ಕರೆಗೆ - ಒಳಗಿಂದ ಓಗೊಂಡು - ಬಂದಾ - ಸುವ್ವೀ ....|

ಅಂಬಿಗ : ಏನಾಗಿ ಬಂದಿರಿ ಎಂತದಾಗಿ ಬಂದಿರಿ ?
ಬಂದಂತಹ ಕಾರ್ಯಗಳ ತಿಳುದ್ಹೇಳಿ ಶಿವರಾಯ್ರೆ -| ಸುವ್ವೀ..||

ಶಿವ : ಏನಾಗಿ ಬರಲಿಲ್ಲಾ - ಎಂತದಾಗಿ ಬರಲಿಲ್ಲಾ -|
ಹೊಳೆಯಾ ಹದ್ದಿನಲ್ಲಿ ಹೊಯ್ಲಾಟ ಆಡುವಾಗ -
ಸುವ್ವೀ..||

ನಿರೂಪಕ : ಅಂಬಿಗನಾ - ಮನೆಲಿ ಅಂಬೆ -ತುಂಬೆ ಹಣ್ಣುಗಳು |
ಕೂಮತಿ ಹಣ್ಣು ಮೆಲ್ಲುತಿದ್ದ - ಗಿಳಿರಾಮಾ...|
ತಟ್ಟನೆ ಹಾರಿದ -ಗೌರಕ್ಕನ ಮನೆಗೆ || ಸುವ್ವೀ..||

ಗಿಳಿರಾಮ : ಹುಚ್ಚುಂಟೆ ಅಕ್ಕಯ್ಯಾ ? ಮರುಳುಂಟೆ ನಿನಗೀಗಾ ?
ಭಾವ ಅಂಬಿಗಿತ್ತಿನ ತರುತಾಳೆ -| ಅಕ್ಕಯ್ಯ -
ಎರಡು ತಟ್ಟೆ ವೀಳ್ಯವ ಬಳಸಬೇಕು || ಸುವ್ವೀ..||

ಗೌರಮ್ಮ : ಹುಚ್ಚುಂಟೆ ರಾಮಪ್ಪ ? ಮರುಳುಂಟೆ ನಿನಗೀಗಾ -|
ಭಾವಾ -ಅಂಬಿಗಿತ್ತಿನ ತರೋದುಂಟೆ ?....| ಸುವ್ವೀ....||

ನಿರೂಪಕ : ನೀ ಸುಳ್ಳು ಮಾತು ಹೇಳೋದಾದ್ರೆ ರಾಮಪ್ಪಾ -|
ನಿನ್ನಾ - ಬೆಕ್ಕಿನ ಕೈಯಲ್ಲಿ ಹಿಡಿಸ್ತೀನಿ...
ನೀ ಹೇಳ್ದ ಮಾತು ನಿಜವಾದ್ರೆ ರಾಮಪ್ಪಾ |
ಹಾಲು ಹಣ್ಣು ಕೊಟ್ಟು ಸಾಕೇನು | ಹಾಗೆ ಹೇಳ್ತಾ
ಇರುವಾಗ | ಶಿವರಾಯ್ರು ಬಂದಾರು ಸುವ್ವಿ ಸುವ್ವೀ....||

ಗೌ : ಎರಡು ಗಿಂಡಿ ನೀರು ಮಡಗಿದಳು ಗೌರಮ್ಮಾ -|

ಶಿವರಾಯ : ಹುಚ್ಚುಂಟೆ ಗೌರಮ್ಮಾ -ಮರುಳುಂಟೆ ನಿನಗೆ-
ಎರಡು ಗಿಂಡಿ ನೀರು ಯಾರಿಗೀಗಾ ? ಸುವ್ವೀ..||

ಗೌ : ಒಂದು ಗಿಂಡಿ ನೀರು ನಿಮಗಾದೋ -ಇನ್ನೊಂದು-
ನಿಮ್ಮೊಳ -ನಾರಿಗಾದೋ- ಎರಡು ಗಿಂಡಿ ನೀರು ಮಡಗಿದೇನೆ ||

ನಿರೂಪಕ : ತಟ್ಟನೆ ಎದ್ದು ಹೋದಾಳು ಒಳಗೆ-
ಎರಡು ತಟ್ಟೆ ವೀಳ್ಯವ ಬಳಸಿದಳು||

ಶಿವ : ಹುಚ್ಚುಂಟೆ ನಿನಗೆ ಗೌರಮ್ಮಾ - ಎರಡು
ತಟ್ಟೆ ವೀಳ್ಯ ಯಾರಿಗೀಗಾ ?

ನಿರೂಪಕ : ತಟ್ಟನೆ ಎದ್ದು ಹೋದಾಳು ಒಳಗೀಗಾ ಗೌರಮ್ಮ |
ಎರಡು ಗಂಗಳಕ್ಕೆ ಬಳಸಿದಳು -

ಗೌ : ಒಂದು ಗಂಗಳ ನಿಮಗೂ -ನಿಮ್ಮೊಳನಾರಿಗೂ|
ಇನ್ನೊಂದು ಗಂಗಳ ನನಗೀಗಾ -||

ನಿರೂಪಕ : ತಟ್ಟನೆ ಎದ್ದು ಕೋಣೆಗೆ ನಡೆದಾಳು ಗೌರಮ್ಮಾ...||
ಎರಡು ಮಂಚಗಳ ವದರಿ ಹಾಸಿದಳು ||

ಶಿವ : ಹುಚ್ಚುಂಟೆ ಮರಳುಂಟೆ ಎರಡು ಮಂಚ ಯಾರಿಗೀಗಾ
ಗೌರಮ್ಮಾ ?

ಗೌ : ಒಂದು ಮಂಚ ನನಗೂ, |ಇನ್ನೊಂದು ಮಂಚ ನಿಮಗೂ-
ನಿಮ್ಮೊಳನಾರಿಗೂ -?

ನಿರೂಪಕ : ಸಮರಾತ್ರಿ ಹೊತ್ತಿನಲಿ ಎದ್ದಾಳೀಗಾ - ಗೌರಮ್ಮ
ಉರುಳಲಿ ಹರಳೆಣ್ಣೆ ಕಾಸಿದಳು||

ಗೌರಮ್ಮ : ಏಳೀಗ ಪುರುಷರೆ ಏಳೀಗಾ |ತಲೆ ಮಂಡೆ ಹೇನುಕಟ್ಟಿದೆ|
ಆರಾರು ಹನ್ನೆರಡು ದಿನವಾದೋ-|

ನಿರೂಪಕ : ನೆತ್ತಿಗೆ ಉರಿಎಣ್ಣೆ ಬಿಟ್ಟಳೀಗ ಗೌರಮ್ಮಾ -|
ನೆತ್ತಿಂದ ತುರುಬಿಗೆ ಜಾರಿದಳು - ಗಂಗಮ್ಮಾ-||
ತುರುಬಿಗೆ ಎಣ್ಣೆ ಬಿಟ್ಟಾಳೀಗ ಗೌರಮ್ಮಾ -|
ಜಾರಿದಳು ಗೌರಮ್ಮಾ| ಭುಜಕ್ಕೀಗಾ
ಭುಜದಿಂದ -ಸೊಂಟಕ್ಕೆ ಮಂಡಿಗೆ-
ಮಂಡಿಂದ ಪಾದಕೆ - ಪಾದದಿಂದ -
ಗಂಗಮ್ಮ - ನಿಂಬೆ ಹಣ್ಣಾಗಿ ಉರುಳ್ಯಾಳು ಸುವ್ವೀ...||

ಶಿವ : ಅಂಜದಿರು ಎಲೆಮಡದಿ ಅಕ್ಕನ ಪಾದ ಹಿಡಿ ಶರಣೆಂದು||

ಗಂಗಮ್ಮ : ಅತ್ತೆಗೆ ಅಂಜುವೆನು - ಮಾವಗೆ ಅಂಜುವೆನು
ತಂದಾ ಪುರುಷರಿಗೆ ತಾಳುವೆನು |
ನನ್ನಂತ ಸರಿಸತಿಗೆ ಅಂಜಕಿಲ್ಲಾ -ಪುರುಷರಿಗೆ ತಾಳುವೆನು|
ನನ್ನಂತ ಸರಿಸತಿಗೆ ಅಂಜಕಿಲ್ಲಾ - ಪುರುಷರೆ||

ನಿರೂಪಕ : ಜಡೆ ಜಡೆ ಹಿಡಕೊಂಡು ಜಗಳಮಾಡಿದರೂ..||

ಅಭಿನಯ ಜುಟ್ಟು ಜುಟ್ಟು ಹಿಡಕೊಂಡು ಗುದ್ದಾ ಟ..ವಾಡಿದರು
ದಾಸರ ಕೇರಿಲಿ ಶಂಖ - ಊದಿದ ಹಾಗೆ-|
ಕುಂಬಾರ ಕೇರಿಲಿ ಗುಂಭ ಬಡಿದ ಹಾಗೆ -|
ರಂಭೆಯವರಾ -ಜಗಳಾ-ಘನವಾದೋ-|

ಗೌರಮ್ಮಾ : ನಿನ್ನಪ್ಪ ಅವ್ವಂದಿರು ಸುಣ್ಣ ಗೋರುವವರು-|
ನಿನ್ನಣ್ಣ ತಮ್ಮಂದಿರು ಮೀನು ಹಿಡಿಯುವವರು -|
ನಿನ್ನಕ್ಕ ತಂಗಿಯರು ಸುಣ್ಣ ಸುಡುವವರು -|
ಬೆಸ್ತರ ಕುಲನೀನೂ -ಜಾಲಾರಿ ಗಂಗೆ ನೀನು | ಸುವ್ವಿ॥

ಗಂ : "ನಿನ್ನ ಪಂಥ ನನ್ನ ಪಂಥ ನಾಳೆ ನೋಡಾನ|

ನಿರೂಪಕ : ಅಣ್ಣಾ ಗುಡುಗು ದೇವರು | ತಮ್ಮಾ ಮಳೆರಾಯಾ
ಇಬ್ಬರಿಗೆ ಆಣೆಕಟ್ಟಿ | ನಡೆದಾಳು ಗಂಗೆ ತವರಿಗೆ | ಸುವ್ವಿ॥
ಗಂಗೆ ಹೋಗಿ ಮೂರು ದಿನಕೆ ಗೌರಿಗೆ ಸೂತಕವಾಯ್ತು
ಅಲ್ಲೆಲ್ಲೂ ಒಂದು ಹನಿ ನೀರಿಲ್ಲಾ-||

ಗೌರಿ : ಮುಂಬಾಳೆ ಬುತ್ತಿ ಕಟ್ಟಿ | ಈರಣ್ಣನ ನೀರಿಗೆ ಕಳುಹ್ಯಾಳು
ಕಾಶಿ ಕಾವೇರಿ ಎಲ್ಲಾ ತಿರುಗಿ ಬಂದಾ |
ಅಲ್ಲೆಲ್ಲೂ ಒಂದು ಹನಿ ನೀರಿಲ್ಲಾ-||

ಈರಣ್ಣ : ಶಿವರಾಯರ ಹತ್ತಿರ ಹೋಗಿ ಬೇಡಿಕೋ ನನ್ನವ್ವಾ|

ಗೌ : ನಾಚಿಕೆ ಮುಖ ಹೊತ್ತು ಹೇಗೆ ಹೋಗಲಿ ಮಗನೆ?

ಈ : ಗಂಗವ್ವನ ಹತ್ತಿರ ಹೋಗಿ ಬೇಡಿಕೋ ತಾಯಿ ತಾಯಿ-|
ಶಿವರಾಯರ ಹತ್ತಿರ ಹೋದಾಳು ಗೌರಿ-

ಶಿವ : ಏನಾಗಿ ಬಂದಿಯಾ ಎಲೆ ಗೌರಿ?

ಗೌ : ನಾನು ಸೂತಕವಾಗಿ ಮೂರು ದಿನವಾದೋ-|
ಮುಂಬಾಳೆ ಬುತ್ತಿ ಕಟ್ಟಿ ಮೂರು ದಿನವಾದೋ-|
ಈರಣ್ಣನ ನೀರಿಗೆ ಕಳಿಸಿದ್ದೆ ಸ್ವಾಮೀ || ಸುವ್ವೀ....||
ಕಾಶಿ ಕಾವೇರಿ ಎಲ್ಲಾ ಅವ ತಿರುಗಿ ಬಂದಾ-|
ಅಲ್ಲೆಲ್ಲೂ ನೀರಿಲ್ಲ ನನ್ನ ಸ್ವಾಮಿ॥

ಶಿವ : ಗಂಗೆಯ ಹತ್ತಿರ ಹೋಗಿ ಬೇಡಿಕೋ-

ಗೌ : ನಾಚಿಕೆ ಮುಖ ಹೊತ್ತು ಹೇಗೆ ಹೋಗಲಿ

ಶಿವ : ಹಾಗೆ ಬಂದ ಗೌರಮ್ಮಾ ಹಾಗೆ ಹೋಗಬೇಡಾ-|
ಹಾಲಲಿ ಸ್ನಾನವ ಮಾಡಿ ಹೋಗು ಗೌರಿ-||

ಗೌ : ಹಾಲಿಗೆ ಹರಿಕುತ್ತ ಬಲುಹೆಚ್ಚು ನನ್ನ ಸ್ವಾಮೀ-|

ಶಿವ : ಹಾಗೆ ಬಂದಾ ಗೌರಮ್ಮಾ ಹಾಗೆ ಹೋಗಬ್ಯಾಡಾ|
ಜೇನಲಿ ಸ್ನಾನವ ಮಾಡಿಹೋಗು||

ಗೌ : ಜೇನಿಗೆ ನೊಣಕಾಟ ಬಲು ಹೆಚ್ಚು ಸ್ವಾಮೀ

ಶಿವ : ಗಂಗಮ್ಮನ ಹತ್ತಿರ ಬೇಡಿಕೋ ತಾಯಿ-|

ನಿ : ಈರಣ್ಣ ಜೂಲಣ್ಣ ಗಂಗೆಯ ಹತ್ತಿರ ಹೋದಾರೀಗಾ-
ಈರಣ್ಣ ಹೋಗುವುದ ದೂರದಿಂದ ಕಂಡು
ಮೆಟ್ಟಿ ಜಲನೀರು ಸಂಪುಸ್ಯಾಳು ||
ಕೈಕಾಲು ಮುಖವಾ ತೊಳೆದಾನು ಈರಣ್ಣಾ ಊಟವ ಮಾಡಿದ
ನಡೆದಾನು ಗಂಗೆಯ ಮನೆಗವನು |

ಗಂ : ಏನಾಗಿ ಬಂದೀಯ ಎಲೆ ಮಗನೆ -ನೀನು?

ಈ : ಏನಾಗಿ ಬರಿಲಿಲ್ಲಾ -ಚಿಕ್ಕಮ್ಮಾ ನಾನು -|
ನನ್ನ ತಾಯಿ ಸೂತಕವಾಗಿ ಮೂರು ದಿನವಾದೊ-|
ಅಲ್ಲೆಲ್ಲೂ ಒಂದು ಹನಿ ನೀರಿಲ್ಲಾ
ನೀನಾದ್ರೆ ಬರಾಬೇಕು -| ನಮ್ಮನೆಗೆ ಚಿಕ್ಕಮ್ಮಾ ಸುವ್ವೀ...||

ಗಂ : ನಿನ್ನಮ್ಮ ಆಡಿದ ಮಾತುಂಟು | "ನನ್ನಪ್ಪ ನನ್ನವ್ವ,
ಅಣ್ಣಂದಿರ -ಅಕ್ಕಂದಿರ -ಬೆಸ್ತರ ಕುಲದ ಜಾಲಾರಿ ಗಂಗೆ ನೀನೂ"
ಆಡಿದ ಮಾತು ಎಲೆ ಮಗನೇ... ಸುವ್ವೀ...||
ಕೈ ಬಾಯಿ ತೊಳೆದು ಊಟವ ಮಾಡು ಸುವ್ವೀ...||

ಈ : ನೀನಾದ್ರೆ ನಮ್ಮನೆಗೆ ಬಂದರೆ ಚಿಕ್ಕಮ್ಮಾ|
ನಾನಾದ್ರೆ ಊಟವ ಮಾಡ್ತೇನೆ ಚಿಕ್ಕಮ್ಮಾ ||

ನಿ : ಈರಣ್ಣ ಮುಂದಾಗಿ ಗಂಗಮ್ಮ ಹಿಂದಾಗಿ |
ಗೌರಮ್ಮನ ಮನೆಗೆ ಬಂದಾರೀಗಾ-|

ಗೌ : ನಾನು ಆಡಿದ ಮಾತುಂಟು ಅಂದು |
ಈರಣ್ಣನ ಕೊಟ್ಟೇನು ನೀರು ತೋರವ್ವಾ-|

ಗಂ : ಈರಣ್ಣ ಇಬ್ಬರಿಗೂ ಮಗನಲ್ಲವೇ ಅಕ್ಕಾ?

ಗೌ : ಜೂಲಣ್ಣನ ಕೊಟ್ಟೇನು ನೀರು ತೋರವ್ವಾ -|

ನಂ : ಜೂಲಣ್ಣ ನನಗೂ ಮಗನಲ್ಲವೇ ? ಅಕ್ಕಾ-

ಗೌ : ವಿನಾಯಕನ ಕೊಟ್ಟೇನು ನೀರು ತೋರವ್ವಾ |

ಗಂ : ವಿನಾಯಕ ಇಬ್ಬರಿಗೂ ಮಗನಲ್ಲವೇ ?

ಗೌ : ಶಿವರಾಯ್ರ ಕೊಟ್ಟೇನು ನೀರು ತೋರವ್ವಾ

ಗಂ : ಶಿವರಾಯ್ರ ಕೊಡೊಮಾತು ನಿಜವೇನೆ ಅಕ್ಕಾ?

ಗೌ : ಶಿವರಾಯ್ರ ಕೊಡೊಮಾತು ನಿಜವಿದು ತಂಗಿ|
ತನ್ನಣ್ಣ ಗುಡುಗುದೇವ ತನ್ನ ತಮ್ಮ ಮಳೆರಾಯಾ |
ಇಬ್ಬರ ಆಣೆ ಬಿಡಿಸಿ ಗಂಗೆ ಸುವ್ವೀ..||

ನಿ : ಗುಡುಗುಡು ಮೋಡ ಥಳ ಥಳ ಮಿಂಚಿತು |
ಕಾಶಿ ಕಾವೇರಿ ಎಲ್ಲಾ ನೀರು ಹರಿದೋಯ್ತು|

ಗೌ : ನನ್ನ ಪ್ರಾಣ ಹೋದರೂ ಶಿವರಾಯ್ರ ಕೊಡೇನು

ನಿ : ಮೆಟ್ಟಿದ ಜಲನೀರು ಸ್ವಲ್ಪ ಸಂಪುಸ್ಯಾಳು ಗಂಗಮ್ಮಾ|
ಮೂರು ಪರದಾರಿ ತಡಕ ಕೊಚ್ಚಿಕೊಂಡು ಹೋದಳು ಗಂಗಮ್ಮಾ ...|

ಗೌ : ಶಿವರಾಯರ ಕೊಟ್ಟೇನು ದಿಟ್ಟೆಗೆ ಎಳೆಯವ್ವಾ||

ಗಂ : ಶಿವರಾಯರ ಕೊಡೊಮಾತು ನಿಜವೇನೆ ಅಕ್ಕಾ?

ಗೌ : ನನ್ನ ಪ್ರಾಣ ಹೋದರೂ ಶಿವರಾಯರ ಕೊಡೇನು....

ನಿ : ದಾಸರ ಕೇರಿಲಿ ಶಂಖ ಊದಿದ ಹಾಗೆ.|
ಕುಂಬಾರ ಕೇರಿಲಿ ಗುಂಭ ಬಡಿದ ಹಾಗೆ|
ರಂಭೆವರ ಜಗಳಾ-ಘನವಾದೋ .... ಸುವ್ವೀ...||
ಇಬ್ಬರು ಹೆಂಡಿರ ಕಾಟ ಬಲುಕಷ್ಟ ಎಂದು| ತನ್ನ ಎದೆಗೆ
ತಾನೆ ಇರಿದುಕೊಂಡ ಕಣ್ಣ ಮುಚ್ಚಿ ಕುಳಿತ ಶಿವನಂದು ||
ಸುವ್ವೀ ಸುವ್ವೀ ಸುವ್ವೀ ಸುವ್ವೀ ಸುವ್ವೀ...||

****

# ಮಂಗಳಂ

ಮಂಗಳವ ಪಾಡುವೆವು ಶ್ರೀ ಏಕದಂತಗೆ।
ಅಪಾರ ಮಹಿಮೆ ಪಡೆದಿರುವ ಶ್ರೀ ಗಣೇಶನಿಗೆ ॥

ಮಂಗಳವ ಪಾಡುವೆವು ಶ್ರೀ ರಂಗನಾಥನಿಗೆ
ಸೃಷ್ಟಿ ರೂಪ ತ್ರಿಮೂರ್ತಿಗಳ ಚರಣ ಕಮಲಕೆ ॥

ಮಂಗಳವ ಪಾಡುವೆವು ಸೀತಾಲಕ್ಷ್ಮಿಗೆ
ಅಪಾರ ಸಿದ್ಧಿ ಸುದ್ದಿಯಲಿರುವ ಶ್ರೀ ಲಕ್ಷ್ಮೀಗೆ॥

ಮಂಗಳವ ಪಾಡುವೆವು ಶ್ರೀ ಶಾರದಾಂಬೆಗೆ
ಸರ್ವ ವಿಧ್ಯೆ ಜ್ಞಾನಧಾರೆ ಸರಸ್ವತಿಗೆ ॥

ಮಂಗಳಾಂಗಿನಿ ಶ್ರೀ ಗೌರಿ ಶ್ರೀ ಲಕ್ಷ್ಮಿಗೆ ।
ಅರಶಿಣ ಹಚ್ಚಿ ಹರಸಿದ ಪಾರ್ವತಿ ದೇವಿಗೆ॥

ಅರಶಿಣ ಹಚ್ಚಲು ಕಲಿಸಿದ ಶ್ರೀ ಗೌರಿಗೆ।
ಮದುವೆಗೆ ಹಾಡನು ಕಲಿಸಿದ ಶಾರದೆ ದೇವಿಗೆ॥

ಮಂಗಳಂ ಜಯ ಮಂಗಳಂ ಜಯ
ಮಂಗಳಂ ಜಯ ಮಂಗಳಂ ಜಯ ॥........

****



## ದಿ॥ ಪಟ್ಟಡ ಮುತ್ತಣ್ಣ

*ನನ್ನ ತಂದೆಯವರಾದ ದಿ॥ಪಟ್ಟಡ ಮುತ್ತಣ್ಣ ಇವರ ಸಂಗ್ರಹದಿಂದ ತೆಗೆದ 1936ರ ಹೊತ್ತಿನಲ್ಲಿ ಬರೆದ ಹಾಡುಗಳನ್ನು ಈ ಮುದ್ರಣದಲ್ಲಿ ಸೇರಿಸಿದ್ದು ಅವರು ಆಗ ಬರೆದ ಅಕ್ಷರ ಮತ್ತು ಅವರ ಸಹಿಯನ್ನು ಈಗಿನ ಯುವ ಜನತೆಗೆ ಪರಿಚಯಿಸಲು ಅವರ ಚಿತ್ರ ಸಹಿತ ಕೊಟ್ಟಿರುತ್ತೇನೆ.*



ಕೊಬ್ಬರಿ ಎಣ್ಣೆ ದಂತದ ಬಾಚಣಿಗೆ ತಟ್ಟೆಲಿರಿಸಿ।
ಕೋಮಲಾಂಗಿ ಸೀತೆಗೀಗ ತಲೆಯಬಾಚಿರಿ॥
ಕೆಂಡ ಸಂಪಿಗೆ ದುಂಡು ಮಲ್ಲಿಗೆ ತಟ್ಟೆಲಿರಿಸಿ ।
ಪಟ್ಟೆಸೀರೆ ತಟ್ಟೆಯಲ್ಲಿಟ್ಟು ತಂದು ಮುಡಿಸಿರಿ ॥
ಹೇಳಿ ಕಳಿಸಿ ಮಾಡಿದಂತ ವಾಲೆ ಮೂಗುತಿ ।
ಅಂದವುಳ್ಳ ತಟ್ಟೆಯಲ್ಲಿ ಐದು ಫಲಗಳು ॥
ಚಂದವುಳ್ಳ ಸೀತೆಗೀಗ ಮಡಿಲ ತುಂಬಿರಿ।
ಸೋಬಾನೆ ಸೀತೆಗೆ । ಸೋಬಾನೆ । ಸೋಬಾನವೋ॥





ವಧುವಿಗೆ ಎಣ್ಣೆ ಅರಶಿಣ ಶಾಸ್ತ್ರ



ಚಿನ್ನದ ತಲೆ ಹೂ (ರಾಗುಟಿ)



ಸಂಪ್ರದಾಯ ಆಭರಣಗಳು



ತಾಳಿಚೈನು (ಸರ್‌ಟಡಿಗೆ)



ಕಾಸ್ತಾಳಿ



ಹೊನ್ನಮ್ಮನ ಕೆರೆ

# ಪ್ರಕಾಶಕರ ಮಾತು

ಹಸೆಮಣೆಯೊಳಗೆ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಘಟ್ಟದ ಮಡಿಲಲ್ಲಿ ನೆಲೆಯೂರಿರುವ ಕೃಷಿಕ ವರ್ಗದ ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಜನಾಂಗದವರ ಸರ್ವ ಶುಭ ಕಾರ್ಯಗಳಲ್ಲಿ ಪ್ರಚಲಿತದಲ್ಲಿ(ದ್ದ)ರುವ ಮದುವೆಯ ಸೋಬಾನೆ ಮತ್ತು ಇತರ ಹಾಡುಗಳ ಸಂಗ್ರಹವಾಗಿದೆ.

ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪನವರು ಕೊಡಗು ಸಂಗಾತಿ ಪತ್ರಿಕೆಗಾಗಿ ಬರೆಯುತ್ತಿರುವ ಯುವ ಬರಹಗಾರರ ಉತ್ಸುಕತೆಯನ್ನು ಅರ್ಥೈಸಿಕೊಂಡು ಅವರನ್ನು ಸೋಬಾನೆ ರಂಗದ ಕಡೆಗೆ ಪ್ರೇರೇಪಿಸಲು ಗೌಡ ಜನಾಂಗದವರ ಆಚಾರ ವಿಚಾರಗಳಲ್ಲಿ ಬರುವ ಶುಭ ಸೋಬಾನೆಗಳ ಸಂಗ್ರಹದ ರಚನೆಯನ್ನು ಪುಸ್ತಕ ರೂಪದಲ್ಲಿ ತರುವ ಪ್ರಯತ್ನ ಮಾಡಿದ್ದಾರೆ. ಈಗೆ 35 ವರ್ಷಗಳಿಂದೀಚೆಗೆ ಗೌಡ ಸಮಾಜ ಹಾಗೂ ವಿದ್ಯಾ ಸಂಘಗಳ ವತಿಯಿಂದ ಮುದ್ರಣಗೊಂಡ ಪುಸ್ತಕಗಳಲ್ಲಿ ಸಾಕಷ್ಟು ಹಾಡುಗಳು ಕಂಡು ಬಂದರೂ, ಇನ್ನೂ ಬೆಳಕಿಗೆ ಬಾರದೆ ಬಿಟ್ಟು ಹೋದ ಅನೇಕ ಹಾಡುಗಳನ್ನು ಇಲ್ಲಿ ಸಂಗ್ರಹಿಸಿ ಕ್ರೋಢಿಕರಿಸಿ, ಯುವ ಜನಾಂಗಕ್ಕೆ ಬಳುವಳಿಯಾಗಿ "ಹಸೆಮಣೆ" ಎಂಬ ಶಿರೋನಾಮೆಯ ಸಂಗ್ರಹವನ್ನು ಪುಸ್ತಕ ರೂಪದಲ್ಲಿ ನೀಡಿರುವುದು ನಮ್ಮ ಜನಾಂಗಕ್ಕೆ ನಿಜಕ್ಕೂ ಹೆಮ್ಮೆಯ ವಿಚಾರವಾಗಿದೆ.

ಸುಮಾರು 7 ಸಾವಿರ ವರ್ಷಗಳ ಪುರಾತನ ಭಾರತದ ಪರಂಪರೆಯಲ್ಲಿ ಅಖಂಡ ಕರ್ನಾಟಕದ ಶ್ರೇಷ್ಠ ಸಂಸ್ಕೃತಿ ಸಿರಿವಂತಿಕೆಯ ಜಾನಪದ ಸಾಹಿತ್ಯ ಸಾಲಿನಲ್ಲಿ ಗೌಡ ಜನಾಂಗದವರ ವಿಶಿಷ್ಟ ಸಂಪ್ರದಾಯವು ಶತಶತಮಾನಗಳಿಂದಲೂ ಹಿರಿಯರಿಂದ ಕಿರಿಯರಿಗೆ ಬಾಯಿಂದ ಬಾಯಿಗೆ ಬಂದು ಇಂದು ನಶಿಸದೆ ಉಳಿದಿರುವ ಅಮೂಲ್ಯ ಸೊತ್ತು ಎಂದರೆ ಗೌಡರ ಸೋಬಾನೆ ಹಾಡುಗಳು ಮಾತ್ರ.

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಗೌಡ ಜನಾಂಗದವರ ಸಂಸ್ಕೃತಿಯನ್ನು ಪ್ರತಿಬಿಂಬಿಸುವುದೇ ಈ ಹಸೆಮಣೆ. ಯುವ ಜನಾಂಗಕ್ಕೆ ತಮ್ಮ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಳ್ಳಲು ಇದು ಉತ್ತಮ ರೀತಿಯಲ್ಲಿ ಸಹಕಾರಿಯಾಗಬಲ್ಲದು. ಇದಕ್ಕೆ ಮುನ್ನುಡಿಯನ್ನು ಬರೆದು ಮಹತ್ವವನ್ನು ಗಿಟ್ಟಿಸಿದ್ದಾರೆ ಹಿರಿಯ ಲೇಖಕರೂ ವಕೀಲರೂ ಆದ ನಮ್ಮೆಲ್ಲರ ಚಿರಪರಿಚಿತರಾದ ಪ್ರೊ|| ಪೂಜಾರಿ ಮೊಣ್ಣಪ್ಪನವರು. ಲೇಖಕಿಯವರ ಅಪಾರ ಶ್ರಮ ಯುವ ಜನಾಂಗದ ಮೇಲಿರುವ ತುಂಬು ಅಭಿಮಾನ ಇವರನ್ನು ತಾರಕಕ್ಕೇರಿಸುತ್ತದೆ. ಇವರ ಶ್ರಮಕ್ಕೆ ಕೊಡಗು ಸಂಗಾತಿಪತ್ರಿಕೆ ಜನಾಂಗದ ಪರವಾಗಿ ಶುಭವನ್ನೂ ಹಾರೈಸುತ್ತದೆ.

ಶ್ರೀಮತಿ ಪಟ್ಟಡ ಶೀಲಾಮಣಿ ಪ್ರಭಾಕರ

(ಸಂಪಾದಕಿ, ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ)

ಕೊಡಗು ಗೌಡ ಮಹಿಳಾ ಒಕ್ಕೂಟ



ಬೈತಡ್ಕ ಜಾನಕಿ ಬೆಳ್ಯಪ್ಪ

## ಹಿನ್ನುಡಿ

ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪನವರ ಸೋಬಾನೆ ಹಾಡುಗಳ ಸಂಗ್ರಹ ಹಸೆಮಣೆ ಮರು ಮುದ್ರಣಗೊಳ್ಳುತ್ತಿರುವುದು ಸಂತಸದ ಸಂಗತಿ. ಹತ್ತು ಕುಟುಂಬ ಹದಿನೆಂಟು ಗೋತ್ರದ ಕೊಡಗು ಗೌಡರ ಶ್ರೀಮಂತ ಜನಪದ ಸಂಸ್ಕೃತಿಯನ್ನು ಪುಷ್ಟಿಗೊಳಿಸುವಲ್ಲಿ ಸೋಬಾನೆ ಹಾಡುಗಳು ಪ್ರಮುಖವಾಗಿ ನಿಲ್ಲುತ್ತವೆ. ಸಂಸ್ಕೃತಿಯ ವಿವಿಧ ಪದರಗಳನ್ನು ಈ ಹಾಡುಗಳು ಬಿಡಿಸುತ್ತವೆ. ಕೊಡಗು ಗೌಡರ ಮದುವೆಗಳಲ್ಲಿ ಸೋಬಾನೆ ಇಲ್ಲದೆ ಯಾವ ಕ್ರಿಯೆಯೂ ಇಲ್ಲ. ಎರಡು ಜೀವಗಳು ಸತಿಪತಿಯಾಗುವಲ್ಲಿ ಶುಭವನ್ನು ಸೂಚಿಸುವ ಈ ಹಾಡುಗಳು ಮುಖ್ಯ ಸಾಧನಗಳಾಗಿವೆ. ವಿವಾಹ ಸಂದರ್ಭದಲ್ಲಿ ಯಾವುದೇ ಶಾಸ್ತ್ರಾಚರಣೆಯೂ ತಪ್ಪಿ ಹೋಗದಂತೆ ಮೊದಲಿನಿಂದ ಕೊನೆಯವರೆಗೂ ಒಂದೊಂದು ಶಾಸ್ತ್ರಕ್ಕೂ ಒಂದೊಂದು ಹಾಡಿರುತ್ತದೆ. ಹಾಡುಗಳಲ್ಲಿ ದೇವ - ದೇವಿಯರ ಮಾದರಿ ವ್ಯಕ್ತಿತ್ವಗಳೊಂದಿಗೆ ಸಮೀಕರಿಸಲಾಗುತ್ತದೆ. ಹೀಗೆ ಮನುಷ್ಯ ಬದುಕಿನ ಪ್ರಮುಖ ಘಟ್ಟಗಳಲ್ಲಿ ಸೋಬಾನೆ ಹಾಡುಗಳು, ಕಾರ್ಯಗಳ ಪ್ರಾಮುಖ್ಯತೆಯನ್ನು ಮತ್ತು ಜವಾಬ್ದಾರಿಯನ್ನು ಹೆಚ್ಚಿಸುತ್ತವೆ.

ಹರಿದು ಹಂಚಿ ಹೋದ ಮತ್ತು ಮರೆತು ಹೋದ ಈ ಸೋಬಾನೆ ಹಾಡುಗಳನ್ನು ಒಂದೆಡೆ ಸಂಗ್ರಹಿಸುವ ಕಾರ್ಯವನ್ನು ಮಾಡಿದ ಶ್ರೀಮತಿ ಜಾನಕಿ ಬೆಳ್ಯಪ್ಪನವರ ಶ್ರಮ ಶ್ಲಾಘನೀಯವಾದುದು. ಕೊಡಗು ಗೌಡ ಸಮುದಾಯದ ಮಹಿಳೆಯರಲ್ಲಿ ಮತ್ತೆ ಮತ್ತೆ ಕೇಳಿ ಬರುವ ಹೆಸರು ಶ್ರೀಮತಿ ಜಾನಕಿ ಬೆಳ್ಯಪ್ಪ ಇವರದು. ಒಂದು ಸಂಸ್ಕೃತಿಯ ಅನನ್ಯತೆ ಮತ್ತು ಚಲನಶೀಲತೆಯನ್ನು ಜೊತೆ ಜೊತೆಯಾಗಿ ಕಾಪಾಡುವ ಕಾರ್ಯವನ್ನು ಇವರು ಮಾಡುತ್ತಿದ್ದಾರೆ. ಒಂದು ಜನಾಂಗದ ಅನನ್ಯತೆಯನ್ನು ಮುಂದಿನ ತಲೆಮಾರಿಗೆ ದಾಟಿಸುವ ಕಾರ್ಯ ಮೆಚ್ಚುವಂಥದ್ದು. ಇವರು 'ಹಸೆಮಣೆ' ಕೃತಿಗೆ ಪಡೆದ ಕೊಡಗಿನ ಗೌರಮ್ಮ ದತ್ತಿನಿಧಿ ಪ್ರಶಸ್ತಿ, ಅಂತರಾಷ್ಟ್ರೀಯ ಮಹಿಳಾ ದಿನಾಚರಣೆ ದಿನ ಪಡೆದ ಕಿತ್ತೂರು ರಾಣಿ ಚೆನ್ನಮ್ಮ ರಾಜ್ಯ ಪ್ರಶಸ್ತಿ, ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಮತ್ತು ಜಾನಪದ ಲೋಕ ಪ್ರಶಸ್ತಿ ಇವುಗಳು ಇವರ ಸಾಧನೆಗೆ ದೊರೆತ ಪ್ರತಿಫಲ.

ಒಂದು ಕೃತಿ ನಾಲ್ಕನೇ ಬಾರಿ ಮುದ್ರಣಗೊಳ್ಳುವುದು ಜನಮನ್ನಣೆಯ ಪ್ರತೀಕ. ಗೃಹಿಣಿಯಾಗಿ ಸಂಸಾರದ ಜವಾಬ್ದಾರಿಯನ್ನು ಉತ್ತಮ ರೀತಿಯಲ್ಲಿ ನಿರ್ವಹಿಸುತ್ತಾ ಸಾಹಿತ್ಯ ಕೃಷಿಯಲ್ಲಿ ತಮ್ಮನ್ನು ತೊಡಗಿಸಿ ಮುನ್ನಡೆಯುತ್ತಿರುವ ಶ್ರೀಮತಿ ಜಾನಕಿಯವರು ಮಹಿಳೆಯರಿಗೆ ಮಾದರಿ. ಇವರಿಗೆ ಸದಾ ಯಶಸ್ಸು ದೊರಕಲಿ.

ಡಾ|| ಕೋರನ ಸರಸ್ವತಿ ಪ್ರಕಾಶ್

Printed at : Sri Krishna Computers & Printers, Madikeri. Ph : 224919, Mob : 94481 35592